# ರಾಘವಾಂಕ ಚತುರ್ಮುಖ

★

ಸಂಪಾದಕರು :

ಹು. ಕಾ. ಜಯದೇವ್

ಎಸ್. ವಿದ್ಯಾಶಂಕರ



★

ಪ್ರಿಯದರ್ಶಿನಿ ಪ್ರಕಾಶನ

ಬೆಂಗಳೂರು–560 020

# ರಾಘವಾಂಕ ಚತುರ್ಮುಖ

ಸಂಪಾದಕರು
ಹು. ಕಾ. ಜಯದೇವ್
ಎಸ್. ವಿದ್ಯಾಶಂಕರ

ಪ್ರಿಯದರ್ಶಿನಿ ಪ್ರಕಾಶನ
39, ಐದನೇ ಬ್ಲಾಕ್,
ಕೆ. ಪಿ. ವೆಸ್ಟ್, ಬೆಂಗಳೂರು–೫೬೦೦೨೦

Raghavanka Chaturmukha: Selected Chapters from Raghavanka's works Edited by H. K. Jayadev and Dr. S. Vidyashankar Publisher: Priyadarshini Prakashana 39, 5th Block, K. P. West, Bangalore-20

ಮೊದಲ ಮುದ್ರಣ : ೧೯೭೪
ಎರಡನೆಯ ಮುದ್ರಣ : ೧೯೭೫
ಮೂರನೆಯ ಮುದ್ರಣ : ೧೯೭೭
ನಾಲ್ಕನೆಯ ಮುದ್ರಣ : ೧೯೭೭





ಬೆಲೆ : ಮೂರು ರೂಪಾಯಿಗಳು

ಪ್ರತಿಗಳು ದೊರೆಯುವ ಸ್ಥಳ
ಪ್ರಕಾಶ ಸಾಹಿತ್ಯ
ಅರಳೇಪೇಟೆ, ಬೆಂಗಳೂರು-೨.

ಮುದ್ರಕರು :
ಲೋಟಸ್ ಎಂಟರ್‌ಪ್ರೈಸಸ್
ರಾಜಾಜಿನಗರ, ಬೆಂಗಳೂರು-560 010

## ಎರಡನೆಯ ಮುದ್ರಣದ ಅರಿಕೆ

ಈ ಕೃತಿ ಎರಡನೆಯ ಮುದ್ರಣವನ್ನು ಕಾಣಲು ಕಾರಣರಾದ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಯೋಜನ ಮಂಡಳಿಯ ಅಧ್ಯಕ್ಷರು ಮತ್ತು ಸದಸ್ಯರಿಗೆ, ಸಕಾಲದಲ್ಲಿ ಆರ್ಥಿಕ ನೆರವು ನೀಡಿದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬೆಂಗಳೂರು ಬ್ರಾಂಚ್‌ನ ಮುಂಗಡ ವಿಭಾಗದ ಅಧಿಕಾರಿಗಳಿಗೆ, ಅಂದವಾಗಿ ತಪ್ಪಿಲ್ಲದೆ ಮುದ್ರಿಸಿ ಕೊಟ್ಟ ಲೋಟಸ್ ಪ್ರಿಂಟರ್ಸ್‌ನ ಮಾಲೀಕರು ಮತ್ತು ಕೆಲಸಗಾರರಿಗೆ ನಮ್ಮ ಆದರ ಪೂರ್ವಕ ವಾದ ಕೃತಜ್ಞತೆಗಳು.

—ಸಂಪಾದಕರು

## ಮೂರನೆಯ ಮುದ್ರಣದ ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸ ಮಂಡಳಿಯ ಅಧ್ಯಕ್ಷರು ಮತ್ತು ಸದಸ್ಯರು ಈ ಕೃತಿಯನ್ನು 77–78ನೇ ಸಾಲಿನ ಪಠ್ಯ ಗ್ರಂಥವಾಗಿ ಗೊತ್ತುಪಡಿಸಿದ್ದರಿಂದ ಮೂರನೆಯ ಮುದ್ರಣದ ಯೋಗ ಇದಕ್ಕೆ ಕೂಡಿ ಬಂದಿತು. ಈ ಉಪಕಾರಕ್ಕಾಗಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸ ಮಂಡಳಿಯ ಅಧ್ಯಕ್ಷರು ಹಾಗೂ ಸದಸ್ಯರಿಗೆ ನಮ್ಮ ಆದರಪೂರ್ವಕ ವಾದ ವಂದನೆಗಳು. ಅಲ್ಪಕಾಲಾವಧಿಯಲ್ಲಿ ಈ ಪುಸ್ತಕವನ್ನು ತಪ್ಪಿಲ್ಲದೆ ಲಿಬರ್ಟಿ ಪ್ರಿಂಟರ್ಸ್‌ನ ಮಾಲೀಕರು ಮತ್ತು ಕೆಲಸಗಾರರು ಮುದ್ರಿಸಿ ಕೊಟ್ಟಿ ರುವರು. ಅವರಿಗೆ ನಮ್ಮ ಪ್ರೀತಿಯ ವಂದನೆಗಳು.

— ಸಂಪಾದಕರು

## ನಾಲ್ಕನೆಯ ಮುದ್ರಣದ ಅರಿಕೆ

ಮೂರನೆಯ ಮುದ್ರಣದ ಪ್ರತಿಗಳು ಮುಗಿದದ್ದರಿಂದ ಈ ಆವೃತ್ತಿ ತರಬೇಕಾಯಿತು. ಅಲ್ಪ ಕಾಲಾವಧಿಯಲ್ಲಿ ನಮ್ಮ ಕೋರಿಕೆಯನ್ನು ಮನ್ನಿಸಿ ಸುಂದರವಾಗಿ ಈ ಪುಸ್ತಕವನ್ನು ಹೊರತರಲು ಲೋಟಸ್ ಎಂಟರ್ ಪ್ರೈಸಸ್‌ನ ಮಾಲೀಕರಾದ ಶ್ರೀ ಪಾಟೀಲ್‌ರವರು ಸಹಕರಿಸಿರುವರು. ಅವರಿಗೆ ನಮ್ಮ ಆದರಪೂರ್ವಕವಾದ ಕೃತಜ್ಞತೆಗಳು.



— ಸಂಪಾದಕರು

# ಪ ರಿ ವಿ ಡಿ

# ಪ್ರಸ್ತಾವನೆ

ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ನಡೆದ ಧಾರ್ಮಿಕ ಮತ್ತು ಸಾಹಿತ್ಯಕ ಕ್ರಾಂತಿಯ ಫಲವಾಗಿ ಕನ್ನಡ ಸಾಹಿತ್ಯ ಲೋಕದಲ್ಲಿ ಅರಳಿದ ಮಂದಾರ ಪುಷ್ಪಗಳು ಎಂದರೆ ಹರಿಹರ ಮತ್ತು ರಾಘವಾಂಕ.

ರಾಘವಾಂಕನ ಸ್ಥಳ ಹಂಪೆ. ಆರಾಧ್ಯ ಬ್ರಾಹ್ಮಣನಾದ ಮಹಾದೇವ ಭಟ್ಟ, ಮತ್ತು ಹರಿಹರನ ಸೋದರಿಯಾದ ರುದ್ರಾಣಿಯ ಸುಪುತ್ರ. ರಾಘವಾಂಕನ ಹುಟ್ಟು ಹೆಸರು ರಾಘವ ಎಂದಿಷ್ಟೇ ಇದ್ದು ಪಂಪಾಪುರದ ರಾಜನಾದ ದೇವರಾಜನ ಆಸ್ಥಾನದಲ್ಲಿ ಹರಿಶ್ಚಂದ್ರ ಕಾವ್ಯವನ್ನು ಓದಿ ಸನ್ಮಾನಿತನಾದ ಮೇಲೆ ರಾಘವಾಂಕ, ರಾಘವಾಂಕ ಪಂಡಿತ ಎಂದು ಆಗಿರಬೇಕು.

ರಾಘವಾಂಕ ತನ್ನ ಸೋದರ ಮಾವನಾದ ಹರಿಹರನಲ್ಲಿಯೇ ವಿದ್ಯಾಭ್ಯಾಸ ಮಾಡಿದನು. ಹರಿಹರನ 'ವರಸುತ'ನಾದನು. ರಾಘವಾಂಕನ ಗುರು ಪರಂಪರೆ ಈ ರೀತಿಯಿದೆ—

ಹಂಪೆಯ ಶಂಕರಪ್ರಭು
|
ಹಂಪೆಯ ಮಾದಿರಾಜ
|
ಹಂಪೆಯ ಮಹಾದೇವ
|
ಹಂಪೆಯ ಹರೀಶ್ವರ

ಈ ಹಂಪೆಯ ಹರೀಶ್ವರನೆ ನೂರಾರು ರಗಳೆಗಳನ್ನು ಬರೆದು ಕನ್ನಡ ಸಾಹಿತ್ಯದಲ್ಲಿ ಹೊಸ ಪರಂಪರೆಯನ್ನು ಆರಂಭಿಸಿದ ರಾಘವಾಂಕನ ಸೋದರ ಮಾವನಾದ ಹರಿಹರ.

ರಾಘವಾಂಕನ ಕಾವ್ಯಗಳಲ್ಲಿ ವೈದಿಕ ಧರ್ಮದ ಆಚಾರಗಳಾದ ಯಜ್ಞ, ಹೋಮ ಮೊದಲಾದವುಗಳ ವಿವರಣೆ ಬರುವುದರಿಂದಲೂ, ವೇದಗಳನ್ನು ಒಪ್ಪಿದಂತೆ ತೋರುವುದರಿಂದಲೂ ಮತ್ತು ವಚನಕಾರರಲ್ಲಿ ಯಾರನ್ನೂ ಸ್ಮರಿಸದೆ ಶೈವ ಕವಿಗಳಾದ ಕಾಳಿದಾಸ, ಮಯೂರ, ಬಾಣ, ಭೋಜ ಮತ್ತು

ಭಾರವಿಗಳನ್ನು ಮಾತ್ರವೆ (ಹರಿಶ್ಚಂದ್ರ ಕಾವ್ಯದಲ್ಲಿ) ಸ್ಮರಿಸಿರುವುದರಿಂದಲೂ ರಾಘವಾಂಕನನ್ನು ವೀರಶೈವನಲ್ಲವೆಂದೂ ಬರಿಯ ಶೈವನೆಂದೂ ಕೆಲವರು ವಿದ್ವಾಂಸರು ಹೇಳುತ್ತಾರೆ. ಈ ವಾದದಲ್ಲಿ ಹುರುಳಿಲ್ಲವೆಂದೇ ಹೇಳಬೇಕು. ಏಕೆಂದರೆ ಬಸವಾದಿಗಳಿಂದ ಪ್ರಣೀತವಾದ ವೀರಶೈವ ಧರ್ಮದ ಪ್ರಭಾವಕ್ಕೆ ಒಳಗಾಗಿಯೂ ಹಿಂದಿನ ಶೈವ ಸಂಪ್ರದಾಯದ ಕೆಲವಾರು ಆಚಾರಗಳನ್ನು ಬಿಟ್ಟಿರದ ಸಂಕ್ರಮಣಾವಸ್ಥೆಯಲ್ಲಿದ್ದ ವೀರಶೈವರು ಹರಿಹರ ಮತ್ತು ರಾಘವಾಂಕರು.

ರಾಘವಾಂಕನ ಕೃತಿಗಳು ಆರು. ಹರಿಶ್ಚಂದ್ರ ಕಾವ್ಯ, ಸೋಮನಾಥ ಚಾರಿತ್ರ, ಶರಭ ಚಾರಿತ್ರ, ಹರಿಹರ ಮಹತ್ವ, ಸಿದ್ಧರಾಮ ಪುರಾಣ ಮತ್ತು ವೀರೇಶ ಚರಿತೆ–ಈ ಕ್ರಮದಲ್ಲಿ ತನ್ನ ಕೃತಿಗಳನ್ನು ರಚಿಸಿದನೆಂದು ರಾಘವಾಂಕ ಚಾರಿತ್ರವನ್ನು ಬರೆದಿರುವ ಸಿದ್ಧನಂಜೇಶನ ಅಭಿಪ್ರಾಯ. ಮೇಲೆ ಹೇಳಿದ ಕೃತಿಗಳಲ್ಲಿ ಶರಭ ಚಾರಿತ್ರ ಮತ್ತು ಹರಿಹರ ಮಹತ್ವ ಸಿಕ್ಕಿಲ್ಲ, ಉಳಿದವು ಅಚ್ಚಾಗಿವೆ. ಶರಭ ಚಾರಿತ್ರ ಸಿಕ್ಕಿದೆಯೆಂದು ಹೇಳುತ್ತಾರೆ.[1] ಆದರೆ ಅಚ್ಚಾಗಿಲ್ಲ. ಇದು ಮುದ್ರಣಗೊಂಡು ಹೊರಬರುವವರೆವಿಗೂ ರಾಘವಾಂಕನ ಕೃತಿಯೊ ಅಲ್ಲವೊ ಎಂಬುದು ಸಂದೇಹ. ಇವುಗಳಲ್ಲದೆ ಸಾಂಗತ್ಯದಲ್ಲಿರುವ 'ದೇವಾಂಗ ದಾಸಿಮಯ್ಯನ ಪುರಾಣ' ಹಾಗೂ ತೆಲುಗಿನಲ್ಲಿ ದ್ವಿಪದಿಯಲ್ಲಿರುವ 'ನಳಚಂಪು' ಇವುಗಳ ಕರ್ತೃವೂ ರಾಘವಾಂಕನೆಂದು ಹೇಳುತ್ತಾರೆ. ಅಲ್ಲದೆ ಸುಮಾರು ಕ್ರಿ.ಶ.೧೭೬೮ ರಲ್ಲಿ 'ಅನುಭವ ಶಿಖಾಮಣಿ'ಯನ್ನು ಬರೆದ ನಾರಸಿಂಹನು ತನ್ನ ಕಾವ್ಯವನ್ನು ರಾಘವಾಂಕನು ಶರಷಟ್ಪದಿಯಲ್ಲಿ ಬರೆದ ಕೃತಿಯನ್ನು ನೋಡಿ ರಚಿಸಿದುದಾಗಿ ಹೇಳಿಕೊಂಡಿದ್ದಾನೆ. ಆದ್ದರಿಂದ ರಾಘವಾಂಕನು ಶರಷಟ್ಪದಿಯಲ್ಲಿ ಒಂದು ಕಾವ್ಯವನ್ನು ರಚಿಸಿರುವ ಸಾಧ್ಯತೆಯಿದೆ ಎಂದು ವಿದ್ವಾಂಸರು ಹೇಳುತ್ತಾರೆ. ದೇಶೀಯ ಛಂದಸ್ಸಾದ ಷಟ್ಪದಿಯಲ್ಲಿ ನಾನಾ ಪ್ರಯೋಗಗಳನ್ನು ಮಾಡಿದ ಮತ್ತು ಕೃತಿಗಳನ್ನು ರಚನೆ ಮಾಡಿದ ರಾಘವಾಂಕನು ದೇಸಿ ಛಂದಸ್ಸಾದ ಸಾಂಗತ್ಯದಲ್ಲಿಯೂ ಕೃತಿ ರಚನೆ ಮಾಡಿರುವುದು ಅಸಾಧ್ಯವಲ್ಲ. ಹಾಗೆಯೆ ಕರ್ಣಾಟಕಾಂಧ್ರಗಳ ನಡುವಣ ಪ್ರದೇಶದವನೂ, ಉಭಯ

---

1. ಬಿ. ವ್ಹಿ. ಮಲ್ಲಾಪುರ, ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ, ಪು. ೩೪.

ಕವಿ ಕಮಲ ರವಿಯೂ, ಉಭಯ ಕವಿ ಶರಭ ಭೇರುಂಡನೂ ಆದ ರಾಘವಾಂಕನು ತೆಲುಗಿನಲ್ಲಿಯೂ ಕೃತಿ ರಚನೆ ಮಾಡಿರುವುದು ಅಸಾಧ್ಯವಲ್ಲ. ಆದರೆ ಕ್ರಿ.ಶ. ೧೬೭೨ರಲ್ಲಿ ರಾಘವಾಂಕ ಚರಿತೆಯನ್ನು ಬರೆದ ಸಿದ್ಧನಂಜೇಶನು ಈ ಕೃತಿಗಳ ಬಗೆಗೆ ಏನನ್ನೂ ಹೇಳಿಲ್ಲದೇ ಇರುವುದರಿಂದ 'ದೇವಾಂಗ ದಾಸಿಮಯ್ಯನ ಪುರಾಣ', 'ನಳಚಂಪು' ಮತ್ತು ಶರಷಟ್ಪದಿಯಲ್ಲಿ ರಚಿತವಾಗಿರ ಬಹುದಾದ ಕೃತಿಯ ಕರ್ತೃತ್ವವನ್ನು ಸಧ್ಯದಮಟ್ಟಿಗಾದರೂ ರಾಘವಾಂಕನಿಗೆ ಆರೋಪಿಸದಿರುವುದು ಸಾಧುವಾದುದೆಂದು ತೋರುತ್ತದೆ.

ದೊರೆತು ಪ್ರಕಟವಾಗಿರುವ ರಾಘವಾಂಕನ ಕೃತಿಗಳಲ್ಲಿ ವೀರೇಶ ಚರಿತೆ ಅಥವಾ ಸೋಮನಾಥ ಚಾರಿತ್ರ ಕವಿಯ ಮೊದಲ ಕೃತಿಯೆಂದೂ, ಸೋಮನಾಥ ಚಾರಿತ್ರವೇ ಕವಿಯ ಮೊದಲ ಕೃತಿಯೆಂದೂ ಹಾಗೆಯೆ ಸಿದ್ಧರಾಮ ಚಾರಿತ್ರ ಕೊನೆಯ ಕೃತಿಯೆಂದೂ, ಹರಿಶ್ಚಂದ್ರ ಕಾವ್ಯವೆ ಕೊನೆಯ ಕೃತಿಯೆಂದೂ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಕವಿಯ ಆತ್ಮ ವಿಕಾಸದ ದೃಷ್ಟಿಯಿಂದ ಕೃತಿಗಳನ್ನು ಪರಿಶೀಲಿಸಿದಾಗ ಸೋಮನಾಥ ಚಾರಿತ್ರ ಕವಿಯ ಪ್ರಥಮ ಕೃತಿಯೆಂದೂ ಹರಿಶ್ಚಂದ್ರ ಕಾವ್ಯ ಕೊನೆಯ ಕೃತಿ ಯೆಂದೂ ಅನ್ನಿಸುತ್ತದೆ. ಏಕೆಂದರೆ ಸೋಮನಾಥ ಚಾರಿತ್ರದಲ್ಲಿ ಮತೀ ಯಾಂಶವೂ, ವೀರೇಶ ಚರಿತೆಯಲ್ಲಿ ಪೌರಾಣಿಕಾಂಶವೂ, ಸಿದ್ಧರಾಮ ಚಾರಿತ್ರದಲ್ಲಿ ಸಾತ್ವಿಕಾಂಶವೂ ಮತ್ತು ಹರಿಶ್ಚಂದ್ರ ಕಾವ್ಯದಲ್ಲಿ ದರ್ಶ ನಾಂಶವೂ ಕಂಡುಬರುತ್ತವೆ. ಆದರೆ ರಾಘವಾಂಕನು ಭವಿಯಾದ ಹರಿಶ್ಚಂದ್ರ ಕಥೆಯನ್ನು ಬರೆದು ತನ್ನ ಗುರುವಾದ ಹರಿಹರನ ಆಗ್ರಹಕ್ಕೆ ಗುರಿಯಾಗಿ ತನ್ನ ಐದು ಹಲ್ಲುಗಳನ್ನು ಕಳೆದುಕೊಂಡು ಮತ್ತೆ ಶೈವ ಪಂಚಕಗಳನ್ನೊರೆದು ಮರಳಿ ಹಲ್ಲುಗಳನ್ನು ಪಡೆದನೆಂಬ ದಂತ ಕಥೆ ಮತ್ತು ಸಿದ್ಧನಂಜೇಶನ ಹೇಳಿಕೆ ರಾಘವಾಂಕನ ಪ್ರಥಮ ಕೃತಿ ಹರಿಶ್ಚಂದ್ರ ಕಾವ್ಯವೆ ಆಗಿರಬೇಕೆಂಬುದಕ್ಕೆ ಪುಷ್ಟಿಯನ್ನೀಯುತ್ತವೆ. ಈ ಪ್ರಸಂಗವನ್ನು ವಿವೇಚಿಸುತ್ತಾ, ಡಾ.ಜಿ.ಎಸ್. ಶಿವರುದ್ರಪ್ಪ ಅವರು 'ಪರಂಪರೆ ಮತ್ತು ರಾಘವಾಂಕ ಪ್ರತಿಭೆ' ಎಂಬ ಲೇಖನ ದಲ್ಲಿ ಹರಿಶ್ಚಂದ್ರ ಕಾವ್ಯವೇ ರಾಘವಾಂಕನ ಪ್ರಥಮ ಕೃತಿಯೆಂದೂ ಅಲ್ಲಿನ ಉನ್ನತ ದರ್ಶನ ಪರಂಪರೆಯ ಘರ್ಷಣೆಗೆ ಒಳಗಾಗಿ ರಾಘವಾಂಕನು ಉಳಿದ ಕೃತಿಗಳ ರಚನೆ ಮಾಡಿದನೆಂದು ಹೇಳುತ್ತಾರೆ. ತಾರ್ಕಿಕವಾಗಿ ಇದು ಸರಿ

ಯಾಗಿ ಕಂಡುಬಂದರೂ ಕೃತಿಗಳಲ್ಲಿನ ಆಂತರಿಕ ಪ್ರಮಾಣದಿಂದ ಇದನ್ನು ಒಪ್ಪಲು ಸಾಧ್ಯವಾಗುವುದಿಲ್ಲ. ಸೋಮನಾಥ ಚಾರಿತ್ರದಲ್ಲಿ ಕಾವ್ಯ ದೋಷ ಗಳೂ, ಕುಕವಿ ನಿಂದೆಯೂ, ಆತ್ಮ ಪ್ರಶಂಸೆಯೂ ಹೆಚ್ಚಾಗಿರುವುದರಿಂದ ಅದೇ ಕವಿಯ ಪ್ರಥಮ ಕೃತಿಯೆಂದೂ ಅನಂತರ ವೀರೇಶ ಚರಿತೆ, ಸಿದ್ಧರಾಮ ಚಾರಿತ್ರ ಮತ್ತು ಹರಿಶ್ಚಂದ್ರ ಕಾವ್ಯಗಳನ್ನು ಬರೆದನೆಂದು ಗ್ರಹಿಸುವುದೇ ಸೂಕ್ತವಾದುದು ಎನ್ನಿಸುತ್ತದೆ

ಷಟ್ಪದಿಯಲ್ಲಿ ಕಾವ್ಯಗಳನ್ನು ರಚನೆಮಾಡಿ ಹೊಸ ಪರಂಪರೆಯೊಂದನ್ನು ಸ್ಥಾಪಿಸಿದವನೂ, ಉಭಯಕವಿ ಶರಭ ಭೇರುಂಡ, ಉಭಯಕವಿ ಕಮಲ ರವಿ, ಅಘಟಕವಿನಿಕರಚೌದಂತ ಮೊದಲಾದ ಬಿರುದಾಂಕಿತನೂ, ತನ್ನ ಜೀವನವೆ ಕಾವ್ಯವೊಂದರ ವಸ್ತುವಾಗುವಂತೆ ಬಾಳಿದವನೂ (ತಾನೆ ಹರಿಹರ ಮಹತ್ವ ಎಂಬ ಹರಿಹರನ ಜೀವನವನ್ನು ಕುರಿತು ಕಾವ್ಯ ರಚನೆ ಮಾಡಿದ್ದಾನೆ. ಆದರೆ ಅದು ದೊರೆತಿಲ್ಲ.) ಆದ ರಾಘವಾಂಕನ ಕಾಲ ಅನಿಶ್ಚಿತವಾಗಿ ಹನ್ನೆರಡನೆ ಶತಮಾನದ ಮಧ್ಯಭಾಗದಿಂದ ಹದಿಮೂರನೆ ಶತಮಾನದ ಅಂತ್ಯದವರೆಗೂ ತೂಗಾಡುತ್ತಿದೆ. ಮೊದಲಿಗೆ ಕಿಟ್ಟೆಲ್ ಅವರು ರಾಘವಾಂಕನ ಕಾಲವನ್ನು ೧೭೯೦ ಎಂದು ಹೇಳಿದರು. ಈ ಪಕ್ಷವನ್ನು ಎತ್ತಿ ಹಿಡಿದ ಡಾ. ಎ. ವೆಂಕಟಸುಬ್ಬಯ್ಯ ಅವರು ರಾಘವಾಂಕನ ಕಾಲವನ್ನು ೧೩೦೦ ಎಂದರು. ಆರ್. ನರಸಿಂಹಾಚಾರ್ ಅವರು ೧೧೬೫ ಎಂದು ಹೇಳಿದರು. ಈ ಎರಡು ಕಾಲಗಳ ನಡುವೆ ೧೨೦೦ ರ ಮೇಲೆ ಎಂದು ಎ. ಆರ್. ಕೃಷ್ಣಶಾಸ್ತ್ರಿಗಳು, ಕೆ. ಜಿ. ಕುಂದಣಗಾರರು ಮತ್ತು ಎಸ್.ಎಸ್. ಮಾಳವಾಡರು ಅಭಿಪ್ರಾಯ ಪಟ್ಟಿದ್ದಾರೆ. ರಾಘವಾಂಕನ ಕಾಲ ೧೧೨೫ ಇದ್ದಿರಬೇಕೆಂದು ಡಾ. ಆರ್. ಸಿ. ಹಿರೇಮಠ ಅವರು ಹೇಳಿದ್ದಾರೆ. ಡಿ. ಎಲ್. ನರಸಿಂಹಾಚಾರ್ಯರು ೧೨೪೦ ಎಂದು ಹೇಳಿದ್ದಾರೆ. ಎಚ್. ದೇವೀರಪ್ಪ ಅವರು ೧೩೦೦ ಎಂದು ಹೇಳಿ ದ್ದಾರೆ. ೧೨೨೫ ಎಂದು ಹೇಳಿದ್ದ ಡಾ. ಆರ್. ಸಿ. ಹಿರೇಮಠ ಅವರು ಸೋಮನಾಥ ಚಾರಿತ್ರದ ಪ್ರಸ್ತಾವನೆಯಲ್ಲಿ ಮತ್ತೊಮ್ಮೆ ಈ ವಿಷಯವನ್ನು ಪರಿಶೀಲಿಸಿ "ರಾಘವಾಂಕನು ಕ್ರಿ.ಶ. ೧೨೦೫ ರ ಸುಮಾರಿನಲ್ಲಿ ಜನಿಸಿ ಕ್ರಿ.ಶ. ೧೨೨೦ರ ಸುಮಾರಿಗೆ ಕಾವ್ಯರಚನೆಯನ್ನಾರಂಭಿಸಿ ಕ್ರಿ. ಶ. ೧೨೯೫ರ ವರೆಗೂ ಜೀವಿಸಿರಬಹುದು" ಎಂದು ಹೇಳಿದ್ದಾರೆ. ಇವುಗಳ ಜೊತೆಗೆ ರಾಘವಾಂಕನನ್ನು

ಕುಮಾರವ್ಯಾಸನ ಸಮಕಾಲೀನ ಎಂದು ತೋರಿಸುವ ದಂತ ಕಥೆಯೊಂದಿದೆ. ಸುಮಾರು ೧೧೪೫ರ ಸುಮಾರಿನ 'ಪೆರಿಯ ಪುರಾಣ' ದಿಂದ ಪುರಾತನರ ಕಥಾ ವಸ್ತುವನ್ನು ತೆಗೆದುಕೊಂಡಿರುವುದರಿಂದ ಮತ್ತು ಸುಮಾರು ೧೧೯೦ ರ ವರೆಗಾದರೂ ಬದುಕಿರಬಹುದಾದ ಏಕಾಂತದ ರಾಮಯ್ಯನನ್ನು ಕುರಿತು ರಗಳೆಯೊಂದನ್ನು ಹರಿಹರ ಬರೆದಿರುವುದರಿಂದ ರಾಘವಾಂಕನಂತೂ ೧೨೦೦ ರ ಈಚಿನವನು ಎಂಬುದು ಗಟ್ಟಿಮಾತು. ಹರಿಹರನ 'ಗಿರಿಜಾಕಲ್ಯಾಣ'ದ ಪದ್ಯಗಳು ಮಲ್ಲಿಕಾರ್ಜುನನ (೧೨೪೫) ಸೂಕ್ತಿ ಸುಧಾರ್ಣವ ಮತ್ತು ಕೇಶಿರಾಜನ (೧೨೬೦) ಶಬ್ದಮಣಿದರ್ಪಣದಲ್ಲಿ ಉದಾಹೃತವಾಗಿವೆ. ಈ ಕೃತಿಗಳಲ್ಲಿ ಉದಾಹೃತವಾಗಿರುವ ಪದ್ಯಗಳು ಪ್ರಕ್ಷೇಪವೆಂದು ಖಚಿತವಾಗಿ ತೀರ್ಮಾನವಾಗುವವರೆಗಾದರೂ ತಾತ್ಪೂರ್ವಕವಾಗಿ, ಬಹುಜನ ಸಮ್ಮತವಾಗಿರುವ ಕ್ರಿ. ಶ. ಸುಮಾರು ೧೨೨೫ ರಾಘವಾಂಕನ ಕಾಲ ಎಂದು ಇಟ್ಟುಕೊಳ್ಳಬಹುದು.

* * *

ಸ್ವರ್ಗದಲ್ಲಿ ಇಂದ್ರನ ಓಲಗದಲ್ಲಿ ಇಕ್ಷ್ವಾಕು ವಂಶದರಸನಾದ ಹರಿಶ್ಚಂದ್ರನು ಸತ್ಯವಂತನೆ ಅಲ್ಲವೆ ಎಂಬ ವಾಗ್ವಾದ ವಸಿಷ್ಠ ಮತ್ತು ವಿಶ್ವಾಮಿತ್ರರಲ್ಲಿ ಉಂಟಾಗುತ್ತದೆ. 'ಕೋಣನೆರಡುಂ ಹೋರೆ ಗಿಡುವಿಂಗೆ ಮೃತ್ಯು' ಎಂಬಂತೆ ವಸಿಷ್ಠ ಮತ್ತು ವಿಶ್ವಾಮಿತ್ರರ ವಾಗ್ವಾದಕ್ಕೆ ಬಲಿ ಪಶುವಾಗುತ್ತಾನೆ ಹರಿಶ್ಚಂದ್ರ. ಹರಿಶ್ಚಂದ್ರನನ್ನು ಅಸತ್ಯನನ್ನಾಗಿಸುತ್ತೇನೆ ಎಂದು ಬಂದ ವಿಶ್ವಾಮಿತ್ರ ಹರಿಶ್ಚಂದ್ರನಿಂದ ಬಹು ಸುವರ್ಣಯಾಗವನ್ನು ಮಾಡಿಸಿ ತನ್ನ ಪ್ರಯತ್ನದಲ್ಲಿ ವಿಫಲನಾಗುತ್ತಾನೆ. ಅನಂತರ ಹರಿಶ್ಚಂದ್ರನ ರಾಜ್ಯದಲ್ಲಿ ನಾನಾ ಮೃಗಗಳ ಹಾವಳಿಯನ್ನುಂಟುಮಾಡಿ ತನ್ಮೂಲಕ ಹರಿಶ್ಚಂದ್ರನನ್ನು ತನ್ನ ಆಶ್ರಮದ ಬಳಿಗೆ ಬರುವಂತೆ ಮಾಡುತ್ತಾನೆ. ತನ್ನ ಕೋಪದಿಂದ ಹುಟ್ಟಿದ ಹೊಲತಿಯರನ್ನು ಮದುವೆಯಾಗಲು ಹೇಳಿ ಹರಿಶ್ಚಂದ್ರನು ಅದನ್ನು ತಿರಸ್ಕರಿಸಲು ತನ್ನ ನುಡಿಯ ಬೆಡಗಿನಿಂದ ಹರಿಶ್ಚಂದ್ರನ ರಾಜ್ಯವನ್ನು ಅಪಹರಿಸಿ ಮತ್ತೆ ಋಣದ ಭಾರವನ್ನು ಹೊರಿಸಿ ಆ ಋಣವನ್ನು ನಲವತ್ತೆಂಟು ದಿನದ ಅವಧಿಯಲ್ಲಿ ತೀರಿಸಬೇಕೆಂದು ಕಳುಹಿಸುತ್ತಾನೆ. ಹರಿಶ್ಚಂದ್ರನು ರಾಜಧಾನಿಯಾದ ಅಯೋಧ್ಯೆಯನ್ನು ತೊರೆದು ದಾರಿಯಲ್ಲಿ ವಿಶ್ವಾಮಿತ್ರನು ಕೊಟ್ಟ ನಾನಾ ಕೋಟಲೆಗಳನ್ನು

ಸಹಿಸಿ ವಾರಣಾಸಿಗೆ ಬಂದು ಪತ್ನೀ ಪುತ್ರ ವಿಕ್ರಯ ಮಾಡಿ ಅನಂತರ ತನ್ನನ್ನೂ ಮಾರಿಕೊಂಡು ಋಣವಿಮುಕ್ತನಾಗುತ್ತಾನೆ. ವಿಶ್ವಾಮಿತ್ರನು ಕೊಟ್ಟ ಇತರ ಸಂಕಟಗಳನ್ನು ಸಹಿಸಿ ಕೊನೆಯದಾದ ಮಮಕಾರವನ್ನು ಕಡಿದುಕೊಳ್ಳಲು ಸಿದ್ಧನಾದಾಗ ವಿಶ್ವೇಶ್ವರ ಪ್ರತ್ಯಕ್ಷನಾಗುತ್ತಾನೆ. ಎಲ್ಲವೂ ಸುಖಾಂತ ವಾಗುತ್ತದೆ.

ಹರಿಶ್ಚಂದ್ರನ ಕಥೆಯ ಭಿತ್ತಿ ವೈದಿಕ ಪುರಾಣಗಳಲ್ಲಿ, ಚಂಡ ಕೌಶಿಕ ನಾಟಕದಲ್ಲಿ ಸಿಗುತ್ತದೆ. ಇದನ್ನು ತೆಗೆದುಕೊಂಡು, 'ಅತಿಹುಸಿವ ಯತಿ ಹೊಲೆಯ ಹುಸಿಯದಿಹ ಹೊಲೆಯನುನ್ನತ ಯತಿವರನು', 'ಹರನೆಂಬುದೇ ಸತ್ಯ ಸತ್ಯವೆಂಬುದೇ ಹರನು' ಎಂಬ ದರ್ಶನವನ್ನು ಹೇಳಲು ಕವಿ ಹೊರಟಿದ್ದಾನೆ. ಪ್ರಕೃತ 'ಶಿವ ಮನಂ ನೋಳ್ಪನೈ' ಎಂಬ ಕಥಾಭಾಗದಲ್ಲಿ ಹರಿಶ್ಚಂದ್ರ ಸತ್ಯ ಕ್ಕಾಗಿ ಪಡುವ ಪಾಡಿನ ಬವಣೆಯ ಚಿತ್ರವಿದೆ. ಹೆಂಡತಿ ಮಕ್ಕಳನ್ನು ಕಳೆದು ಕೊಂಡು ತಾನೂ ಕೂಡ ಅನಾಮಿಕನಿಗೆ ಆಳಾಗಿರಬೇಕಾಗಿ ಬಂದಿತು. ಈ ಎಲ್ಲ ಕಷ್ಟಗಳನ್ನೆದುರಿಸುವಾಗ ಹರಿಶ್ಚಂದ್ರನಿಗೆ ಅಧಿಕಾರ ಮದ, ಕುಲ ಮದ, ಒಂದೊಂದಾಗಿ ಕಳಚಿಕೊಳ್ಳುತ್ತಾ ಹೋಗುತ್ತದೆ. 'ಕೌಶಿಕ ಮುನೀಶ್ವರ ಮೊದಲನಾಮಿಕಂ ಕಡೆ ಸಮಸ್ತರ ಮನಕೆ ಸತ್ಯನೆನಿಸುವೆನು', 'ರವಿ ಕುಲಕೆ ಕುಂದಿಂದು ಬಂದಡಂ ಬರಲಿ' ಎಂಬ ನಿಲುವಿಗೆ ಹರಿಶ್ಚಂದ್ರ ಬರುತ್ತಾನೆ. ಈ ನಿಲುವೆ ಮುಂದೆ ಇನ್ನೂ ಬಲವಾಗಿ ಪತ್ನಿಯ ಮೋಹವನ್ನು ಕಡಿದೊಗೆ ಯಲು ಸಿದ್ಧನಾದಾಗ ಹರಿಶ್ಚಂದ್ರನಿಗೆ ವಿಶ್ವೇಶ್ವರನ ಸಾಕ್ಷಾತ್ಕಾರವಾಗುತ್ತದೆ. ಹರಿಶ್ಚಂದ್ರ ತನ್ನ ಸತ್ಯ ಪರಿಪಾಲನ ಪ್ರಯತ್ನದಲ್ಲಿ ಎಲ್ಲೆಲ್ಲಿ ಮುಂಗಾಣದೆ ನಿಲ್ಲು ತ್ತಾನೊ ಅಲ್ಲೆಲ್ಲಾ ಮಂತ್ರಿಯಾದ ಸತ್ಯವ್ರತ ಮತ್ತು ಮಡದಿಯಾದ ಚಂದ್ರಮತಿ ಅವನನ್ನು ಎಚ್ಚರಿಸಿದ್ದಾರೆ. ವಿಶ್ವಾಮಿತ್ರನ ಆಶ್ರಮದ ಬಳಿ ಹರಿಶ್ಚಂದ್ರನಿಗೆ ದುಃಸ್ವಪ್ನ ಬಿದ್ದಾಗಲೆ ಏನೊ ಕೇಡನ್ನು ನಿರೀಕ್ಷಿಸಿದ ಚಂದ್ರಮತಿ ಏನಾದರೂ ಸತ್ಯವನ್ನು ಬಿಟ್ಟು ಕೆಡಬೇಡ ಎಂದು ಗಂಡನನ್ನು ಎಚ್ಚರಿಸು ತ್ತಾಳೆ. ವಿಶ್ವಾಮಿತ್ರನ ಮಾಯೆಯಿಂದ ಕಾಡ್ಗಿಚ್ಚು ಎಲ್ಲರನ್ನೂ ಸುಡುವಂತೆ ಹೆದರಿಸುತ್ತಿದ್ದಾಗ ಚಂದ್ರಮತಿಯಿಂದ ಎಲ್ಲರೂ ಪಾರಾಗುತ್ತಾರೆ. ಮತ್ತೆ ವಾರಣಾಸಿಯಲ್ಲಿ ಏನೂ ತೋಚದಿದ್ದ ಹರಿಶ್ಚಂದ್ರನಿಗೆ 'ಸಾಲದೊಳು ಪೋದ ನಿತು ಪೋಗಲೆಮ್ಮಿಬ್ಬರಂ ಮಾರಿ ಬಳಿಕುಳಿದುದಂ ಕಾಣು' ಎಂದು ಎಚ್ಚರಿ

ಸುತ್ತಾಳೆ. ಹೀಗೆ ಹರಿಶ್ಚಂದ್ರನ ಸತ್ಯ ಪರಿಪಾಲನೆಯಲ್ಲಿ ಚಂದ್ರಮತಿ ಉದ್ದಕ್ಕೂ ನೆರವಾಗಿದ್ದಾಳೆ. ವಿಶ್ವಾಮಿತ್ರನೊಡ್ಡಿದ ಕ್ರೂರ ಪರೀಕ್ಷೆಗಳಲ್ಲಿ ಒಂದಾದ, ಸುತ್ತುವರಿದ ಅಸತ್ಯದಾವಾನಳನಿಂದ ಹರಿಶ್ಚಂದ್ರಾದಿಗಳು ಪಾರಾಗಿ ಬಂದುದು ಚಂದ್ರಮತಿಯ ಧೈರ್ಯದಿಂದ. ಆಕೆ ದೈವಕ್ಕೆ ನಮಿಸಿ, ವಿಶ್ವಾಮಿತ್ರನಿಗೆ ಒಳ್ಳೆಯದನ್ನು ಹಾರೈಸಿ ಉರಿಯುವ ಬೆಂಕಿಯನ್ನು ಪ್ರವೇಶ ಮಾಡಿದಾಗ 'ತರುಣ ಸೂರ್ಯಂ ಕತ್ತಲೆಯನೆ ಹೊಕ್ಕಂತಾಯ್ತು'. ಕವಿ ಇಲ್ಲಿ 'ಉತ್ತಮರ ಮುಂದಾವ ಠಕ್ಕಿರಲಾಪುದು' ಎಂದು ಉದ್ಗಾರವನ್ನು ತೆಗೆಯುತ್ತಾನೆ. ಈ ಪ್ರಸಂಗದ ಚಿತ್ರಣದಲ್ಲಿ ರಾಮಾಯಣದ ಸೀತೆಯ ಅಗ್ನಿಪ್ರವೇಶದ ಪ್ರಭಾವ ಇದ್ದಿರಬಹುದು. ಪಾತಿವ್ರತ್ಯದಲ್ಲಿ, ಪತಿಸೇವೆಯಲ್ಲಿ ಸೀತೆಗೆ ಚಂದ್ರಮತಿ ಯಾವ ವಿಧದಲ್ಲಿಯೂ ಕಡಿಮೆಯಿಲ್ಲ ಎನ್ನುವುದು ಕವಿಯ ಅಭಿಪ್ರಾಯವಿದ್ದಂತೆ ಕಂಡುಬರುತ್ತದೆ.

ಇಡೀ 'ಹರಿಶ್ಚಂದ್ರ ಕಾವ್ಯ'ದ ಸೂತ್ರಧಾರ ವಿಶ್ವಾಮಿತ್ರ. ಪ್ರಕೃತ ಕಥಾಭಾಗವಾದ 'ಶಿವ ಮಸಂ ನೋಳ್ಪನ್ನೆ' ಎಂಬ ಭಾಗದಲ್ಲಿ ಪ್ರತ್ಯಕ್ಷವಾಗಿ ವಿಶ್ವಾಮಿತ್ರ ಎಲ್ಲಿಯೂ ಕಂಡುಬರುವುದಿಲ್ಲ. ಆದರೆ ಅವನ ಅನುಮತಿಯಿಲ್ಲದೆ ಹುಲ್ಲುಕಡ್ಡಿಯೂ ಅಲುಗುವುದಿಲ್ಲ. ಪ್ರಾಕೃತಿಕ ಶಕ್ತಿಗಳನ್ನು ನಿಯಂತ್ರಿಸಬಲ್ಲವನು ಅವನು. ಕ್ರೂರ ಮೃಗಗಳಾಗಿ, ಕಾಡ್ಗಿಚ್ಚಾಗಿ, ನಕ್ಷತ್ರಕನಾಗಿ (ನೆವಕ್ಕೆ ನೀನಿರಾಂ ಬಂದು ಕಾಡುವೆನೆಂದು ವಿಶ್ವಾಮಿತ್ರ ನಕ್ಷತ್ರಕನಿಗೆ ಹೇಳಿರುತ್ತಾನೆ) ಹರಿಶ್ಚಂದ್ರನನ್ನು ವಿಶ್ವಾಮಿತ್ರ ಕಾಡುತ್ತಾನೆ. ಓದುಗರಿಗೆ ಕಾಣುವುದು ವಿಶ್ವಾಮಿತ್ರನ ಈ ಕ್ರೂರವಾದ ಮುಖ ಮಾತ್ರ. ಈ ಕ್ರೂರತನದ ಹಿಂದೆಯೆ ಉದ್ದಕ್ಕೂ ಹರಿದು ಬರುವ ಮೃದು ಹೃದಯ ಯಾರಿಗೂ ಗೋಚರಿಸುವುದಿಲ್ಲ. ನಿಜಕ್ಕೂ ಹರಿಶ್ಚಂದ್ರನನ್ನು ಅಸತ್ಯವಂತನನ್ನಾಗಿಸಬೇಕಿದ್ದರೆ ಅದು ವಿಶ್ವಾಮಿತ್ರನಿಗೆ ಅಸಾಧ್ಯವಾದುದಾಗಿತ್ತೆ ? ಆದರೆ ವಿಶ್ವಾಮಿತ್ರನ ಉದ್ದೇಶ ಹರಿಶ್ಚಂದ್ರನನ್ನು ಅಸತ್ಯವಂತನನ್ನಾಗಿಸುವುದಲ್ಲ. ಹರಿಶ್ಚಂದ್ರನ ಮೂಲಕ ಸತ್ಯದ ಮಹಿಮೆಯನ್ನು ಲೋಕಕ್ಕೆ ಸಾರುವುದಾಗಿದೆ. ಆದ್ದರಿಂದಲೆ ವಿಶ್ವಾಮಿತ್ರನ ಅಪ್ಪಣೆಯಂತೆ ಅಗ್ನಿ ವಿಪ್ರನಾಗಿ ಬಂದು, ಯಮ ವೀರಬಾಹುಕನಾಗಿ ಬಂದು ಚಂದ್ರಮತಿ ಲೋಹಿತಾಶ್ವರನ್ನೂ ಮತ್ತು ಹರಿಶ್ಚಂದ್ರನನೂ ಕೊಂಡುಕೊಂಡು ಹರಿಶ್ಚಂದ್ರನ ಸತ್ಯ ಪರಿಪಾಲನೆಗೆ ನೆರವಾಗುತ್ತಾರೆ. ಆದ್ದ

ರಿಂನಲೆ ವಿಶ್ವಾಮಿತ್ರನದು ಕಾಡುವ ಕೈಯೂ ಹೌದು, ಕಾಪಾಡುವ ಕೈಯೂ ಹೌದು. ಆದರೆ ಲೋಕದ ಕಣ್ಣಿಗೆ ಕಾಣುವುದು ಕಡು ಮುಳಿದವನಂತೆ. ಕವಿ ಬೇಕೆಂದೇ ವಿಶ್ವಾಮಿತ್ರನನ್ನು ಹಾಗೆ ಚಿತ್ರಿಸಿದ್ದಾನೆ. ಮುನಿವರೇಣ್ಯನೂ, ಇಂದ್ರ ಸನ್ಮಾನಿತನೂ ಆದ ವಿಶ್ವಾಮಿತ್ರನ ಪಾತ್ರ ಚಿತ್ರಣದಲ್ಲಿ ಕವಿ ತೂಕ ತಪ್ಪಿದಂತೆ ಕಂಡುಬಂದರೂ ವಾಸ್ತವವಾಗಿ ಹಾಗಾಗಿಲ್ಲ.

* * *

ಸಿದ್ಧರಾಮನು ಅಲ್ಲಮ–ಬಸವ–ಚನ್ನಬಸವ ಇವರೇ ಮೊದಲಾದ ಹನ್ನೆರಡನೆಯ ಶತಮಾನದ ಶರಣರ ಸಮಕಾಲೀನ. ಸುಪ್ರಸಿದ್ಧ ಅನುಭಾವಿ, ವಚನಕಾರ. ಈತ 68,000 ವಚನಗಳನ್ನು ಹಾಡಿದಂತೆ ತಿಳಿದುಬರುತ್ತದೆ.[1] 'ಕಪಿಲಸಿದ್ಧ ಮಲ್ಲಿಕಾರ್ಜುನ' ಎಂಬುದು ಈತನ ವಚನಗಳ ಅಂಕಿತ. ಸಿದ್ಧರಾಮನ ಬದುಕನ್ನು ಕುರಿತು ಹರಿಹರ ರಗಳೆಯೊಂದನ್ನು ಬರೆದಿರುವ ಸಾಧ್ಯತೆ ಇದೆ. ವಿದ್ವಾಂಸರುಗಳು ಅಭಿಪ್ರಾಯಪಡುವಂತೆ ಈ ರಗಳೆಯನ್ನು ಆಧರಿಸಿಯೇ ರಾಘವಾಂಕ 'ಸಿದ್ಧರಾಮಚರಿತ್ರ'ವನ್ನು ಬರೆದಿರಬಹುದು. ಹರಿಹರನು ಸಿದ್ಧರಾಮನ ಬಗೆಗೆ ಬರೆದಿರಬಹುದಾದ ರಗಳೆಯ ಕೃತಿ, ಜನತೆಯಲ್ಲಿ ಸಿದ್ಧರಾಮನ ಬಗೆಗೆ ಪ್ರಚಲಿತವಿದ್ದ ಅನೇಕ ಕತೆಗಳು ಮತ್ತು ಸಿದ್ಧರಾಮನೇ ಬರೆದಿರುವ ವಚನಗಳು–ಈ ಮೂಲಸಾಮಗ್ರಿಗಳನ್ನು ಉಪಯೋಗಿಸಿಕೊಂಡು 'ಸಿದ್ಧರಾಮಚಾರಿತ್ರ' ಗ್ರಂಥರಚನೆಯನ್ನು ರಾಘವಾಂಕ ಮಾಡಿರುವನು.

ರಾಘವಾಂಕನ ದೃಷ್ಟಿಯಲ್ಲಿ ಕಥಾನಾಯಕ ಸಿದ್ಧರಾಮನು ಅಯೋನಿಜನು; ಭೂವಳಯದೊಳಗುಳ್ಳ ಸರ್ವಜೀವಾಳಿಗಳ ಪಾವನಂ ಮಾಡಲೆಂದು' ಬಂದವನು; ಕಾರಣರುದ್ರನು. 'ಧರೆಗೆ ಸೊನ್ನಲಪುರವೆ ಕೈಲಾಸ. ಆ ಜಗದ ಸಿದ್ಧರಾಮನು ಈಶ್ವರ. ಇಲ್ಲಿ ಶೋಭಿಸುವ ಗುಡ್ಡರು ಗಣೇಶ್ವರರು. ಅಲ್ಲಿನ ಜನರೆಲ್ಲ ಅಮರರು. ಅವರ ಸತಿಯರು ರುದ್ರಕನ್ನಿಕೆಯರು. ಅಲ್ಲಿನ ಶಿವಭವನಗಳು ಅಷ್ಟ, ಷಷ್ಟಿ ತೀರ್ಥ'—ಈ ಮಾತುಗಳು ಕವಿಯ ಅಂತರಾಳದ

---

1. ಸಿದ್ಧರಾಮೇಶ್ವರ ವಚನಗಳು (ಸಂ: ಡಾ॥ ಆರ್. ಸಿ. ಹಿರೇಮಠ) ವಚನ 107

ಭಕ್ತಿ–ಗೌರವಗಳನ್ನೂ, ಸಿದ್ಧರಾಮನ ಬಗೆಗಿರುವ ಅತಿಪೂಜ್ಯತೆಯನ್ನೂ ಸ್ಪಷ್ಟಪಡಿಸುತ್ತವೆ.

ಭೂವಳಯದೊಳಗುಳ್ಳ ಸರ್ವಜೀವಾಳಿಗಳ ಕ್ಷೇಮಚಿಂತನೆ ಸಿದ್ಧರಾಮನಿಗೆ ಸೇರಿದ್ದು ಆದಕಾರಣ 'ಹೆಂದದಣು ಮೊದಲಿಜುಹೆ ಪಶುಪಕ್ಷಿ ಮೃಗವಾನೆ'ಗಳಿಗೆ ಸತ್ರವನ್ನು ಕಟ್ಟಿಸಿದನು. ಸರ್ವರಿಗೆ ಭೂದಾನ, ಗೋದಾನ, ಕನ್ಯಾದಾನ, ವಸ್ತ್ರದಾನ, ಮಹಿಷದಾನ, ಅಖಿಳಾನ್ನದಾನವನ್ನು ಮಾಡಿದನು. ಜಗಜ್ಜನದ ಕೃಪೆಗೆ ನಿತ್ಯಹೋಮವನ್ನು ಮಾಡಿದನು. ಶಿವಯೋಗಿಯ ಶರೀರ ವೃಥಾ ಸವೆಯಲಾಗದಸುಗೊಂಬನಿತು ಕಾಯಕ ನಡೆಯುತಿರಬೇಕೆಂದು ಕೆರೆಯನ್ನು ಕಟ್ಟಿಸಿದನು. ಸಿದ್ಧರಾಮನು, 'ದಯ ಸಮುಗ್ರ'ನೂ 'ಭೂತ ಸ್ನೇಹಿ'ಯೂ ಆಗಿದ್ದುದರಿಂದ ಪಶುಪಕ್ಷಿ ಕ್ರಿಮಿಕೀಟಾದಿಗಳು ನೀರ್ಗುಡಿಯಲು–ಅವುಗಳ ಭವ ನಾಶವಾಗುವಂತೆ–ಕೆರೆಯನ್ನು ನಿರ್ಮಿಸಿದನು.

ಬಿಲ್ಲೇಶ ಬೊಮ್ಮಯ್ಯನ ಪ್ರಸಂಗ ಸಿದ್ಧರಾಮನ ಭೂತಾನುಕಂಪೆಗೆ ಅತ್ಯಂತ ಸೊಗಸಾದ ನಿದರ್ಶನವಾಗಿದೆ. ಬಿಲ್ಲೇಶ ಬೊಮ್ಮಯ್ಯನು ಕಡು ಬಡತನದಿಂದ ಸಾಲಗಾರನಾಗಿ ದಾಯಾದಿಗಳ ಆಸ್ತಿಯನ್ನೆಲ್ಲಾ ಇರಿಕಿಕೊಂಡು ಅವರ ಹಿಂಸೆಗೆ ಹೆದರಿ ಸೊನ್ನಲಿಗೆಗೆ ಓಡಿಬಂದು ಸಿದ್ಧರಾಮನ ಶಿಷ್ಯರುಗಳಲ್ಲಿ ಒಬ್ಬನಾಗಿ ಸೇರಿಕೊಂಡನು. ಈ ಸುದ್ದಿ ತಿಳಿದ ಸಾಲಗಾರರು ಬೊಮ್ಮಯ್ಯನನ್ನು ಹುಡುಕಿಕೊಂಡು ಸೊನ್ನಲಿಗೆಗೆ ಬಂದರು. ಸಾಲ ಮರಳಿಸುವಂತೆ ಪೀಡಿಸಿದರು. ಯಾವುದಕ್ಕೂ ಜಗ್ಗದ ಬೊಮ್ಮಯ್ಯನನ್ನು ಕೊನೆಗೆ 'ಬಡ್ಡಿಯನ್ನಾದರೂ ಕೊಡು' ಎಂದು ಕೇಳಿದರು. 'ಅಸಲೂ ಇಲ್ಲ ಬಡ್ಡಿಯೂ ಇಲ್ಲ, ಹಣವೆಲ್ಲ ಮಲ್ಲಿಕಾರ್ಜುನನದು' ಎಂದು ಬೊಮ್ಮಯ್ಯ ಕಡ್ಡಿ ಮುರಿದಂತೆ ನುಡಿದನು. ಸಾಲಕೊಟ್ಟವರು 'ಕೊಡದಿದ್ದರೆ ಬೇಡ, ನಿನಗೆ ಕರುಣೆ ಬಂದಾಗ ಕೊಡು, ನಾವು ಹೋಗಿಬರುತ್ತೇವೆ' ಎಂದಾಗ ಬೊಮ್ಮಯ್ಯ 'ಹೋದರೆ ಭಕ್ತ-ರಾಣೆ' ಎಂದು ಅವರನ್ನು ಅಡ್ಡಗಟ್ಟಿದನು. ಸಾಲಕೊಟ್ಟವರು ಸಿದ್ಧರಾಮನಲ್ಲಿಗೆ ದೂರೊಯ್ದರು. ವಿಚಾರಣೆ ಮಾಡಿದ ಸಿದ್ಧರಾಮನು ಬೊಮ್ಮಯ್ಯನನ್ನು ಕರೆದು 'ನೀನು ಇವರಿಗೆ ಕೊಡಬೇಕಾದ ಹಣವನ್ನೆಲ್ಲಾ ಕೊಟ್ಟು ಬಿಡು' ಎಂದನು. ಆಗ ಆ ಮೂರ್ಖರು 'ನಾವು ಕೊಡುವುದಿಲ್ಲ, [illegible] ವಿಷಯ

ದಲ್ಲಿ ನಿಮ್ಮ ಆಜ್ಞೆಯನ್ನು ಮೀರಿದ್ದೇನೆ' ಎಂದನು. ಅವನ ವರ್ತನೆಗೆ ಬೇಸರ ಗೊಂಡ ಸಿದ್ಧನು 'ಇನ್ನು ನನಗೆ ಇವನನ್ನು ತಿದ್ದಲಾಗದು, ಯಾರಿಂದ ಸಾಧ್ಯವೋ ಅವರ ಬಳಿಗೆ ಕರೆದುಕೊಂಡು ಹೋಗಿ' ಎಂದನು. ಬೊಮ್ಮಯ್ಯ ನನ್ನು ಧರ್ಮಸ್ಥಾನಗಳಿಗೆ ಕರೆದುಕೊಂಡು ಹೋಗುತ್ತಿದ್ದಾಗ ಗುರುವಾಜ್ಞೆ ಯನ್ನು ಮೀರಿದ ಅವನನ್ನು ಜನರೆಲ್ಲಾ ತುಚ್ಛೀಕರಿಸಿ ನುಡಿದಾಗ ತನ್ನ ಭಂಡ ತನದ ಬಗೆಗೆ ನಾಚಿ ಕತ್ತಿಯಿಂದ ಇರಿದುಕೊಂಡು ಸತ್ತು ನರಕಕ್ಕಿಳಿದನು.

ಗಂಧರ್ವನೋರ್ವನಿಂದ ಬಿಲ್ಲೇಶಬೊಮ್ಮಯ್ಯ ನರಕದಲ್ಲಿ ನರಳುತ್ತಿರುವ ಸುದ್ದಿ ತಿಳಿದು ಅವನನ್ನು ಉದ್ಧರಿಸಲು ಅಲ್ಲಿಗೆ ನಡೆದು ತನ್ನ ಲಾಕುಳವನ್ನು ಸಿದ್ಧರಾಮ ಚಾಚಿದನು. ಲಾಕುಳವನ್ನು ಹಿಡಿದ ಬೊಮ್ಮಯ್ಯನನ್ನು ನಾರಕಿ ಗಳೆಲ್ಲ ಸಾಲಾಗಿ ಹಿಡಿದುಕೊಂಡು 'ಮೇಲಕ್ಕೆ ಎತ್ತು, ಕರುಣೆಗಳರಸ' ಎಂದು ಪ್ರಾರ್ಥಿಸಿದರು. ನಾರಕಿಗಳನ್ನೆಲ್ಲಾ ಉದ್ಧರಿಸುವುದು ಸರಿಯೋ ತಪ್ಪೋ ಎಂಬ ಸಂದಿಗ್ಧ ತಲೆದೋರಲು ಸಿದ್ಧನು ಲಾಕುಳವನ್ನು ಹಾಗೆಯೇ ಬಿಟ್ಟು ಕೈಲಾಸಕ್ಕೆ ಬಂದು ಶಿವನಲ್ಲಿ ತನ್ನ ಸಮಸ್ಯೆಯ ಅರಿಕೆ ಮಾಡಿದನು. ನನ ಗೊಂದು ಲಂಚ ಕೊಟ್ಟರೆ ಎಲ್ಲರನ್ನೂ ಮೇಲೆತ್ತಬಹುದು. ಆದಿಲಿಂಗಕ್ಕೆ ಹನ್ನೆರಡು ಸಾವಿರ ಸೊಲಿಗೆ ತುಪ್ಪದಿಂದ ಅಭಿಷೇಕ ಮಾಡಬೇಕು. ಸಾವಿರ ಮದುವೆಯನ್ನು ಒಂದೇ ಮುಹೂರ್ತದಲ್ಲಿ ಮಾಡಬೇಕು ಎಂದು ಶಿವ ಹೇಳಲು ಅದಕ್ಕೆ ಸಿದ್ಧನು 'ನಿನ್ನ ಕರುಣೆಯಿಂದ ಇದೆಲ್ಲ ನಡೆಸುತ್ತೇನೆ' ಎಂದು ಒಪ್ಪಿ ನರಕಕ್ಕೆ ಮರಳಿ ಬಂದು ಪಂಚಾಕ್ಷರೀ ಮಂತ್ರ ಬಲದಿಂದ ನಾರಕಿಗಳನ್ನೆಲ್ಲಾ ಮೇಲೆತ್ತಿದನು.

ಬಿಲ್ಲೇಶ ಬೊಮ್ಮಯ್ಯ ಕಳ್ಳ, ಕಪಟಿ, ಮೋಸಗಾರ. ಗುರುವಿಗೇ ಸುಳ್ಳು ಹೇಳಿದ, ಆತನ ಆಜ್ಞೆಯನ್ನೇ ಮೀರಿದ ದ್ರೋಹಿ. ತನ್ನ ಅನುಚಿತ ವರ್ತನೆಗೆ ಗುರು ಬೇಸರಗೊಂಡು ಹೊರನೂಕಿಸಿದಾಗ ಜನರೆಲ್ಲಾ ತುಚ್ಛೀಕರಿಸಿ ಬೈದಾಗ ಬೊಮ್ಮಯ್ಯನ ಅಂತರಂಗದ ಯಾವುದೋ ಒಂದು ಮೂಲೆಯಲ್ಲಿದ್ದ ಆತ್ಮಗೌರವ ಸೆಟೆದು ನಿಲ್ಲುತ್ತದೆ. ಬಂಡತನದ ಬಗೆಗೆ ಮನ ನಾಚಿ ತನ್ನ ಬಗ್ಗೆ ತನಗೇ ಹೇಸಿಗೆಯಾಗಿ ಇನ್ನು ಬದುಕು ಬೇಡವೆಂದು ಕತ್ತಿಯಿಂದ ಹತ್ತೆಂಟು ಸಲ ಇರಿದುಕೊಂಡು ಪ್ರಾಣಬಿಡುವನು. ತನ್ನ ತಪ್ಪಿಗೆ ಪಶ್ಚಾತ್ತಾಪಪಟ್ಟು

ನರಕಕ್ಕಿಳಿದ ಬಿಲ್ಲೇಶ ಬೊಮ್ಮಯ್ಯ ಅಲ್ಲಿ ಸಿದ್ಧರಾಮನನ್ನು ಜಪಿಸಿ ಗುರು ಕೃಪೆಗೆ ಪಾತ್ರನಾಗಿ ನರಕವಾಸದಿಂದ ಬಿಡುಗಡೆ ಹೊಂದಿದನು. ಪ್ರೊ. ಡಿ.ಎಲ್. ನರಸಿಂಹಾಚಾರ್ಯರು ಹೇಳುವಂತೆ[1] 'ಇಂಥ ಪಾತ್ರ ಕನ್ನಡ ಕಾವ್ಯಗಳಲ್ಲಿ ದೊರೆಯುವುದು ಅಪರೂಪ. ರಾಘವಾಂಕನಿಂದ ಅದಕ್ಕೆ ಒಂದು ವಿಶಿಷ್ಟತೆಯುಂಟಾಗಿದೆ. ಅದು ಎಲ್ಲಾ ಕಾಲದಲ್ಲಿಯೂ ಜೀವಂತವಾಗಿರುವ ಪಾತ್ರ.'

ರಾಘವಾಂಕ ಚಿತ್ರಿಸಿರುವ ಸಿದ್ಧರಾಮನ ಪಾತ್ರ ಅಪೂರ್ವವಾದುದು. ಸಿದ್ಧರಾಮ ನ್ಯಾಯ ನಿಷ್ಠುರಿ ಅಷ್ಟೇ ಕರುಣಾಮಯಿ. ಬಿಲ್ಲೇಶಬೊಮ್ಮಯ್ಯನು ಪಡೆದ ಸಾಲವನ್ನು ಸಾಲಿಗರಿಗೆ ಹಿಂತಿರುಗಿಸಲು ಒಪ್ಪದಿದ್ದಾಗ 'ಇವ ಮೂರ್ಖ ನಿಮ್ಮಿಂದ ತಿದ್ದದಾರಿಂದಪ್ಪುದವರ ಮುಂದಾಡಿಕೊಳಿ ಹೋಗಿ' ಎಂದು ಬೇಸರದಿಂದ ನುಡಿದನು. ಮೇಲು ನೋಟಕ್ಕೆ ಕಠಿಣನಾಗಿ ಸಿದ್ಧ ಕಂಡು ಬಂದರೂ ಅಂತರಂಗದಲ್ಲಿ ಮೃದು. ಪಶ್ಚಾತ್ತಾಪದಗ್ಧನಾಗಿ ಬಿಲ್ಲೇಶ ಬೊಮ್ಮಯ್ಯ ಕತ್ತಿಯಿಂದ ಇರಿದುಕೊಂಡು ಪ್ರಾಣಬಿಟ್ಟಾಗ ಅವನ ಸಾಲಿಗರಿಗೆ ಹಣ ಸಂದಾಯಮಾಡಿ ಅವರನ್ನು ಕಳುಹಿಸಿದನಲ್ಲದೆ ಸತ್ತ ತನ್ನ ಶಿಷ್ಯನ ಹೆಣ ವನ್ನು ಅಗಳಿನಲ್ಲಿ ಈಡಾಡಿ ಸಂಸ್ಕಾರ ಕಾರ್ಯ ಮಾಡುವಂತೆಯೂ ತನ್ನ ಗುಡ್ಡರಿಗೆ ಆಜ್ಞೆಮಾಡುತ್ತಾನೆ. ಅಷ್ಟೇ ಅಲ್ಲ, ಕಾರುಣ್ಯಮೂರ್ತಿಯಾದ ಸಿದ್ಧರಾಮ ನರಕದಲ್ಲಿ ನರಳುತ್ತಿದ್ದ ತನ್ನ ಶಿಷ್ಯ ಬದುಕಿದ್ದಾಗ ಎಷ್ಟೇ ನೀಚ ನಾಗಿ ವರ್ತಿಸಿದ್ದರೂ ಅವನ ಮೇಲೆ ಕರುಣೆದೋರಿ ಅಲ್ಲಿಂದ ಅವನನ್ನು ಮೇಲೆತ್ತುತ್ತಾನೆ. 'ದಮ್ಮಯ್ಯ ತರಹರಿಸಲಾಱದೀ ಬಿದ್ದೇವಯ್ಯೋ ದಯಾ ಶರಧಿ ಶಿವಘೋ ಕರುಣಿಸೆಂದು ನರಕದ ನರರ ಮಾಲೆ' ವಿಶೇಷವಾಗಿ ಮೊರೆ ಯಿಟ್ಟಾಗ ಆ ಕರುಣೆಗಳರಸ ಅವರನ್ನೂ ಮೇಲೆತ್ತುವ ಸಾಹಸ ಮಾಡುತ್ತಾನೆ. ಭಕ್ತರ ಮೊರೆಗೆ ದಯಾನಿಧಿಯ ಮನ ಹೇಗೆ ಪ್ರವಿಸಿತೆಂಬುದನ್ನು ಮೇಲಿನ ಸಂದರ್ಭ ಪರಿಚಯಿಸುತ್ತದೆ. ಹೀಗೆ ಸಿದ್ಧರಾಮನ ಸ್ವಭಾವವನ್ನು ಚಿತ್ರಿಸುವಲ್ಲಿ ಕವಿ ತನ್ನ ಅಪೂರ್ವವಾದ ದೈವದತ್ತ ಪ್ರತಿಭೆಯನ್ನು ಪ್ರಕಟಪಡಿಸಿರುವನು.

* * *

---

1. ಸಿದ್ಧರಾಮ ಚಾರಿತ್ರ, ಪೀಠಿಕೆ, ಪು. lix

ಹುಲಿಗೆರೆಯಲ್ಲಿ ಪಾರಿಸಶೆಟ್ಟಿ ಮಗಳಾದ ಪದ್ಮಾವತಿಯನ್ನು ಮದುವೆಯಾಗಿದ್ದ ಆದಯ್ಯ. ಒಂದು ದಿನ ಶಿವಭಕ್ತರಿಗಾಗಿ ಉಣಿಸನ್ನು ಸಿದ್ಧಗೊಳಿಸಲು ತನ್ನ ಹೆಂಡತಿ ಪದ್ಮಾವತಿಗೆ ಆದಯ್ಯ ಹೇಳಿರುತ್ತಾನೆ. ಆದರೆ ಅದೇ ವೇಳೆಗೆ ಮನೆಗೆ ಜೈನ ಶ್ರಮಣರು ಬರಲು ಆದಯ್ಯ ಮನೆಯಲ್ಲಿಲ್ಲದಿರುವುದನ್ನು ತಿಳಿದ ಪಾರಿಸಶೆಟ್ಟಿ ಒತ್ತಾಯದಿಂದ ಮಗಳು ಶಿವಭಕ್ತರಿಗೋಸ್ಕರ ಸಿದ್ಧಗೊಳಿಸಿದ್ದ ಆಹಾರವನ್ನು ಕೊಂಡೊಯ್ಯುತ್ತಾನೆ. ಶಿವಭಕ್ತರ ಜೊತೆಯಲ್ಲಿ ಮನೆಗೆ ಬಂದ ಆದಯ್ಯ ವಿಷಯವನ್ನು ತಿಳಿದು ಕ್ರುದ್ಧನಾಗುತ್ತಾನೆ. ಹುಲಿಗೆರೆಯ ಸುರಹೊನ್ನೆ ಬಸದಿಯಲ್ಲಿ ಸೌರಾಷ್ಟ್ರದ ಸೋಮನಾಥನನ್ನು ಪ್ರತಿಷ್ಠಾಪನೆ ಮಾಡದೆ ಉಣ್ಣೆನೆಂದು ಪ್ರತಿಜ್ಞೆಮಾಡಿ ಅದರಂತೆ ಸೌರಾಷ್ಟ್ರದ ಸೋಮನಾಥನನ್ನು ಪುಲಿಗೆರೆಗೆ ಆದಯ್ಯ ತರುತ್ತಾನೆ.

ಹೀಗೆ ಪ್ರತಿಜ್ಞೆಮಾಡಿ ಸೌರಾಷ್ಟ್ರದ ಸೋಮನಾಥನನ್ನು ತರುವೆನೆಂದು ಹೊರಟು ಶಿವನ ನಾನಾ ಪರೀಕ್ಷೆಗಳನ್ನು ಗೆದ್ದು ಶಿವನ ಕಾರುಣ್ಯವನ್ನು ಗಳಿಸಿದ ಕಥಾಭಾಗವೆ 'ನಿಷ್ಠೆವಿಡಿದು ನಡೆದಂ ಧೀರನಾದಯ್ಯನಾದಯ್ಯನು'. ಆದಯ್ಯ ಶಿವನೊಡ್ಡಿದ ಪ್ರಲೋಭನೆಗಳಿಂದ ಪಾರಾಗಿ, ದೇಹಾಭಿಮಾನವನ್ನು ಗೆದ್ದು ಶಿವಕಾರುಣ್ಯವನ್ನು ಪಡೆಯುತ್ತಾನೆ. ಆದಯ್ಯನಲ್ಲಿ ಕಾಣುವ ಮಾಹೇಶ್ವರ ನಿಷ್ಠೆ ಭಕ್ತನಿಗೆ ಅವಶ್ಯಕವಾದದ್ದು. ಭಕ್ತನಾದವನಿಗೆ ಅನ್ಯಮತದ ಬಗ್ಗೆ ಅವಜ್ಞೆ, ತಿರಸ್ಕಾರಗಳು ಒಂದು ಹ ದಲ್ಲಿ ಬೇಕು. ಭಕ್ತ ಆ ಹಂತದಲ್ಲಿಯೆ ಸ್ಥಾಯಿಯಾಗಿ ನಿಲ್ಲಬಾರದು. ಭಕ್ತ ಅನುಭವ ಹೆಚ್ಚಾದಂತೆ ದರ್ಶನ ವಿಶಾಲವಾಗುತ್ತದೆ. 'ಪರರ ದೈವವನಳಿ ಶಿವನ ನಿಲಿಸಿಹನೆಂಬ ಕೃತ್ಯ' ನಿನಗೇಕೆ ಎಂದು ಶಿವನು ಪ್ರಶ್ನಿಸಿದ್ದಕ್ಕೆ 'ಎನ್ನ ದೇಹಾಭಿಮಾನ ನಿಮಿತ್ತ ಮಾಡೆ ಬಳಿಕೆನ್ನಿಂದ ನರಕಿಗಳು ಬೇಱಿಲ್ಲ ಧರಣಿಯೊಳಗೆನ್ನ ಸಮಯಾಭಿಮಾನ ನಿಮಿತ್ತ ಮಾಡಿದಡೆ ದೋಷವೆನಗಿಲ್ಲ' ಎಂಬ ಆದಯ್ಯನ ಉತ್ತರ ಮಾಹೇಶ್ವರ ನಿಷ್ಠೆಗೆ ಅನುಗುಣವಾದುದು.

ಹರಿಶ್ಚಂದ್ರನಲ್ಲಿ ಕಂಡುಬರುವುದು ಸತ್ಯನಿಷ್ಠೆ. ಆದಯ್ಯನಲ್ಲಿ ಕಂಡುಬರುವುದು ಮಾಹೇಶ್ವರನಿಷ್ಠೆ. ಈ ನಿಷ್ಠೆಯ ಸ್ತರಗಳಲ್ಲಿ ವ್ಯತ್ಯಾಸವಿರಬಹುದಾದರೂ ಅವುಗಳ ಸಾಕ್ಷಾತ್ಕಾರಕ್ಕೆ ಹರಿಶ್ಚಂದ್ರ ಮತ್ತು ಆದಯ

ಪಡುವ ಪಾಡಿನಲ್ಲಿ ಸಾಮ್ಯತೆ ಕಂಡುಬರುತ್ತದೆ. ಆದರೆ ಹರಿಶ್ಚಂದ್ರ ಮಾನಸಿಕವಾಗಿ ಅಧಿಕವಾದ ವೇದನೆಯನ್ನನುಭವಿಸುತ್ತಾನೆ. ಆದಯ್ಯ ದೈಹಿಕವಾಗಿ ಅಧಿಕವಾದ ವೇದನೆಯನ್ನನುಭವಿಸುತ್ತಾನೆ. ಇಬ್ಬರೂ ನಿರ್ದಿಷ್ಟ ಅವಧಿಯಲ್ಲಿ ತಮ್ಮ ತಮ್ಮ ಪ್ರತಿಜ್ಞೆ ಅಥವಾ ಮಾತನ್ನುಳಿಸಿಕೊಳ್ಳಲು ನಾನಾ ಕಷ್ಟಗಳನ್ನು ಅನುಭವಿಸಿ ಕೊನೆಯಲ್ಲಿ ಫಲ ಹೊಂದುತ್ತಾರೆ. ಇಬ್ಬರ ಪ್ರಯತ್ನದ ಹಿಂದೆಯೂ ಅವರ ಪತ್ನಿಯರ ನೆರವಿದೆ. ಹರಿಶ್ಚಂದ್ರ ತನ್ನ ಸತಿ ಚಂದ್ರಮತಿಯ ತಲೆ ಕಡಿಯಲು ಸಿದ್ಧನಾದಾಗ ವಿಶ್ವೇಶ್ವರ ಸಾಕ್ಷಾತ್ಕಾರವಾಗುತ್ತಾನೆ. ಆದಯ್ಯ ದೇಹಾಭಿಮಾನವನ್ನು ಬಿಡಲು ಸಿದ್ಧನಾದಾಗ ಶಶಿಮೌಳಿ ಪ್ರತ್ಯಕ್ಷನಾಗುತ್ತಾನೆ.

ಆದಯ್ಯ ಐತಿಹಾಸಿಕ ವ್ಯಕ್ತಿ. ಇವನು ಬಸವಣ್ಣನವರ ಹಿರಿಯ ಸಮಕಾಲೀನನಾಗಿದ್ದಿರಬಹುದು. ಇವನು ವಚನಕಾರನೂ ಆಗಿರುವನು. ಇವನ ವಚನಗಳ ಅಂಕಿತ ಸೌರಾಷ್ಟ್ರ ಸೋಮೇಶ್ವರ. ಕ್ರಿ.ಶ. ೧೧೦೦ರಲ್ಲಿ ಇವನು ಪುಲಿಗೆರೆಯಲ್ಲಿ ಸೌರಾಷ್ಟ್ರ ಸೋಮನಾಥನನ್ನು ಪ್ರತಿಷ್ಠಾಪಿಸಿದಂತೆ ಶಾಸನಗಳಿಂದ ತಿಳಿದುಬರುತ್ತದೆ. ಹರಿಹರ 'ಆದಯ್ಯನ ರಗಳೆ' ಎಂಬ ಪುಟ್ಟ ಕೃತಿ ರಚಿಸಿರುವನು. ಈ ಕೃತಿಯನ್ನು ಹಾಗೂ ಜನತೆಯಲ್ಲಿ ಪ್ರಚಲಿತವಿದ್ದ ಆದಯ್ಯನ ಕತೆಯನ್ನು ಭಕ್ತಿಯಿಂದ ಓದಿ, ಲಾಲಿಸಿ ಸ್ವತಃ ಪುಲಿಗೆರೆಯನ್ನು ಸಂದರ್ಶಿಸಿ ರಾಘವಾಂಕನು ಸೋಮನಾಥ ಚಾರಿತ್ರವನ್ನು ಬರೆದಂತೆ ತೋರುತ್ತದೆ. ಸೋಮನಾಥ ಚಾರಿತ್ರ ತಾಮಸಿಕಾಂಶ ಪ್ರಧಾನವಾದ ಕಥೆ. ಹರಿಶ್ಚಂದ್ರ ಕಾವ್ಯದಂತಹ ದರ್ಶನ ಕಾವ್ಯವನ್ನು ಬರೆದ ರಾಘವಾಂಕನು ಸೋಮನಾಥ ಚಾರಿತ್ರದಂತಹ ತಾಮಸಿಕಾಂಶ ಪ್ರಧಾನವಾದ ಕಾವ್ಯವನ್ನು ಬರೆದದ್ದು ಅಥವಾ ಬರೆಯಬೇಕಾಗಿ ಬಂದುದು ಕವಿ ತನ್ನ ಸಮಕಾಲೀನ ಸಮಾಜಕ್ಕೆ ತೆತ್ತ ಅಥವಾ ತೆರಬೇಕಾದ ಕಾಣಿಕೆ.

* * *

ಉದ್ದಂಡ ಷಟ್ಪದಿಯಲ್ಲಿ 'ವೀರೇಶ ಚರಿತ್ರೆ' ರಚಿತವಾಗಿದ್ದು ಕೇವಲ ಎರಡು ಸಂಧಿ 127 ಪದ್ಯಗಳನ್ನು ಒಳಗೊಂಡಿದ್ದು ಪುಟ್ಟ ಕಾವ್ಯವೆನ್ನಿಸಿಕೊಂಡಿದೆ. ದಕ್ಷಯಜ್ಞದ ಕಥೆ ಪುರಾಣಪ್ರಸಿದ್ಧ. ದಕ್ಷಯಜ್ಞದ ಕಥೆಯು

ಮೂಲಕ ಶಿವನ ಲೀಲೆಗಳಲ್ಲಿ ಒಂದಾದ ವೀರಭದ್ರ ಲೀಲೆಯನ್ನು ಮೊದಲಿಗೆ ಹರಿಹರ 'ವೀರಭದ್ರ ದೇವರ ರಗಳೆ'ಯಲ್ಲಿ ಹೇಳಿದನು. ಇದರಿಂದ ಪ್ರಭಾವಿತನಾಗಿ ರಾಘವಾಂಕ ಶಿವನ ಅವತಾರ–ಲೀಲೆ ಪ್ರಧಾನವಾಗಿರುವ 'ವೀರೇಶ ಚರಿತೆ'ಯನ್ನು ಬರೆದಿರುವನಾದರೂ ಇಲ್ಲಿ ಕಣ್ಣು ಕಟ್ಟಿದ ಕುದರೆಯ ಅನುಸರಣೆಯಿಲ್ಲ.

ಮನುಜರು, ಸಾವವರು ; ಕನಿಷ್ಠರು–ಇವರುಗಳನ್ನು ಇಂದ್ರ, ಚಂದ್ರ, ರವಿ, ಕರ್ಣ, ದಧೀಚಿ, ಬಲೀಂದ್ರರೆಂದು ಅನವರತ ಹೊಗಳದ 'ಕಡು ಸೊಂಪಿನ ಪೆಂಪಿನ ಹಂಪೆಯಾಳ್ದ' ನನ್ನು ಅಹರ್ನಿಶಂ ನೆನೆಯುವ, ಹೊಗಳುವ, ಅರ್ಚಿಸುವ ಪ್ರತಿಜ್ಞೆ ಹರಿಹರನದು. ಈ ಕ್ರಾಂತಿಕಾರಿ ಪ್ರತಿಜ್ಞೆ ರಾಘವಾಂಕನಿಗೂ ತುಂಬಾ ಅಪ್ಯಾಯಮಾನವಾದಂತಿದೆ. ಆತ ತನ್ನ ಹರಿಶ್ಚಂದ್ರ ಕಾವ್ಯದಲ್ಲಿ 'ಹಂಪೆಯರಸನಂ ಪೊಗಳ್ವ ನಾಲಗೆಯೊಳ್ ಅನ್ಯದೈವವ ಭವಿಗಳಂ ಕೀರ್ತಿಸಿದೆನಾದೊಡೆ ಮನಸಿಜಾರಿಯ ಭಕ್ತನಲ್ಲ' ಎಂದೂ ವೀರೇಶ ಚರಿತೆಯಲ್ಲಿ 'ಶಿವಭಕ್ತರ್ಗೆ ಶಿವಂಗೆ ಆಂ ಮಾಱದ ಮತಿಯೊಳ್ ಮರೆದು ಅಜಗಿಜ ಹರಿಗಿರಿ ಸುರಪತಿ ಗಿರಿಪತಿ ಮೊದಲಾದುಡುಕುಳಿ ದೈವವನು ಅವನೀಶಂ ಮೊದಲೆನಿಸಿದ ಭವಿಗಳನು ನುತಿಸಿದೆನಾದೊಡೆ ಸಲೆ ಶಿವದೂಷಕ ನಾನು' ಎಂದೂ ತನ್ನ ಸೋದರಮಾವನ ಪ್ರತಿಜ್ಞೆಗೆ ಮನತೆತ್ತು ದನಿಗೂಡಿಸಿರುವನು. ತನ್ನ ಪ್ರತಿಜ್ಞೆಗೆ ಅನುಸಾರಿಯಾಗಿ 'ಶಿವಕವಿ' ರಾಘವಾಂಕನು ವೀರೇಶ ಚರಿತೆಯಲ್ಲಿ ಶಿವಪಾರಮ್ಯವನ್ನು ವಿಶೇಷವಾಗಿ ಪ್ರತಿಪಾದಿಸಿರುವಂತೆ ಕಂಡು ಬರುತ್ತದೆ.

ಸಕಲ ರಾಜರು, ದೇವತೆಗಳಿಂದ ಗೌರವಾದರಗಳನ್ನು ಪಡೆದ ದಕ್ಷ ಶಿವನಿಂದಲೂ ವಂದನೆ ಸ್ವೀಕರಿಸಬೇಕೆಂಬ ಅದಮ್ಯ ಬಯಕೆಯಿಂದ ಕೈಲಾಸಕ್ಕೆ ಬರಲು ಇವನ ಅಂತರ್ಯವನ್ನರಿತಿದ್ದ ಶಿವ ಆದರಿಸದೆ ಕಡೆಗಣಿಸುವುದು, ಸಭೆಯಲ್ಲಿದ್ದವರೂ ವಂದಿಸದೆ ಸುಮ್ಮನಿದ್ದುದು ದಕ್ಷನ ಕೆರಳಿಗೆ ಮೂಲವಾಯಿತು; ದಕ್ಷನ ಶಿವ ದ್ವೇಷಕ್ಕೆ, ಮುಂದಿನ ಎಲ್ಲ ಅನಾಹುತಗಳಿಗೆ ಕಾರಣೀಭೂತವಾಯಿತು. ಅವಮಾನದ ದಳ್ಳುರಿಯಲ್ಲಿ ಬೆಂದ ದಕ್ಷನು ಯಾಗ ಮಾಡಲು ಹೊರಟಾಗ ಅವನ ಮಂತ್ರಿ ಅದು ಶುಭದಾಯಿಯಲ್ಲವೆಂದು ಎಚ್ಚರಿಸಿದನು.

ಶಿವರಹಿತ ಯಾಗದಲ್ಲಿ ಭಾಗಿಯಾಗಲು ಒಪ್ಪದ ದಧೀಚಿಯ ಇದಿರಿನಲ್ಲೇ ಶಿವನನ್ನು ಮನಬಂದಂತೆ ನಿಂದಿಸಿ ಆ ಮುನಿಯ ಕೋಪಕ್ಕೆ ತುತ್ತಾಗಿ 'ನಿನ್ನಯಾಗ ನಡೆಯದಿರಲಿ ನಿನ್ನ ತಲೆಯು ಹುಡಿಯಾಗಲಿ ನಿನ್ನ ಯಾಗವು ನಾಶವಾಗಲಿ' ಎಂದು ಶಾಪಕ್ಕೆ ಗುರಿಯಾದನು. ತಂದೆಯು ಮಾಡ ಹೊರಟ ಯಾಗವನ್ನು ತಡೆಯಲು ದಕ್ಷನಿದ್ದಲ್ಲಿಗೆ ಬಂದ ದಾಕ್ಷಾಯಿಣಿ ವಿಶೇಷವಾಗಿ ಅವಮಾನಿತಳಾದಳು. ಇಷ್ಟು ಸಾಲದೆಂಬಂತೆ ಪತಿ ನಿಂದೆಯನ್ನು ತಂದೆ ಮಾಡುವುದನ್ನು ಕೇಳಿ ಸಹಿಸಲಾರದೆ ದಾಕ್ಷಾಯಿಣಿ ತಂದೆ–ಮಗಳ ಸಂಬಂಧವನ್ನು ಹರಿದು ಶಿವದ್ವೇಷಕ್ಕೆ ತಕ್ಕ ಪ್ರಾಯಶ್ಚಿತ್ತವಾಗಲಿ ಎಂದು ದಕ್ಷನನ್ನು ಶಪಿಸಿ ಅಗ್ನಿ ಪ್ರವೇಶ ಮಾಡಿ ಆ ದಕ್ಷ ಸಂಬಂಧವಾದ ದೇಹವನ್ನು ತೊರೆದು ಅಗ್ನಿಮುಖೇನ ಆಕಾಶಕ್ಕೆ ಹಾರಿದಳು. ಜಗನ್ಮಾತೆಯಿಂದ ಸಕಲ ವಿವರಗಳನ್ನೂ ತಿಳಿದ ಶಿವ ಪ್ರಳಯ ಭೈರವ ರೂಪವನ್ನು ಧರಿಸಿದನು. ಅವನ ಹಣೆಗಣ್ಣಿನಿಂದ ವೀರೇಶನು ಉದ್ಭವವಾದನು. ಫಾಲನೇತ್ರದಿಂದ ಉಗ್ರ ರೂಪವನ್ನು ಧರಿಸಿ ಬಂದ ತನ್ನ 'ವೀರಶಿಶು' ವೀರೇಶನನ್ನು ಶಾಂತನಾಗುವಂತೆ ಶಿವನು ಅಪ್ಪಣೆ ಮಾಡಿದನು. ಹೀಗೆ ಮೇಲಿನ ಘಟನಾಪರಂಪರೆಯನ್ನೇ ಗಮನಿಸಿದಾಗ ದಕ್ಷನ ಮನದಲ್ಲಿ ಭುಗಿಲೆಂದೆದ್ದ ಕೋಪವೇ ಮುಂದಿನ ಎಲ್ಲಾ ಅನಾಹುತಗಳಿಗೆ ಮೂಲ ಬೀಜವಾಯಿತೆಂಬ ಅರಿವು ನಮಗಾಗುತ್ತದೆ. ದಕ್ಷನ ಕೋಪದ ಕೆರಳಿಗೆ ಕೈಲಾಸದಲ್ಲಿ ಶಿವನು ಮಾಡಿದ ಅವಮರ್ಯಾದೆ ಕಾರಣವಾಯಿತು. ಈ ಅರ್ಥದಲ್ಲಿ ಶಿವನ ಲೀಲಾವಿಲಾಸವೇ ವೀರೇಶಚರಿತೆಯಾಗಿದೆ. 'ಶಿವಕವಿ' ಯಾದ ರಾಘವಾಂಕ 'ಶಿವಪಾರಮ್ಯ'ದ ಹಿರಿತನವನ್ನು ತನ್ನ ಈ ಕೃತಿಯಲ್ಲಿ ಸಾದರಪಡಿಸಿರುವನು. ಮುನಿದರೆ ಭೀಕರನೂ ಒಲಿದರೆ ದಯಾಸಿಂಧುವೂ ಆದ ಶಿವನ ಇಮ್ಮುಖದ ಚಿತ್ರವನ್ನು ಕವಿ ಈ ಕೃತಿಯಲ್ಲಿ ಕೊಟ್ಟಿರುವನು.

ರಾಜಾಧಿರಾಜರು, ದೇವತೆಗಳು ಇವರಿಂದ ಗೌರವ–ಆದರಗಳನ್ನು ಪಡೆದು ಬಂದ ದಕ್ಷಪಿತಾಮಹ ಮೂಲೋಕದೊಡೆಯ ಪರಶಿವನಿಂದಲೂ ವಂದನೆ ಸ್ವೀಕರಿಸಬೇಕೆಂಬ ಆಸಕ್ತಿಯಿಂದ ಕೆಂಡದ ಆಭರಣಕ್ಕೆ ಮನವಿಟ್ಟ ಅರಗಿನ ಗೊಂಬೆಯಂತೆ ಶಿವನ ಸಭೆಗೆ ಆಗಮಿಸಿದ ಭಾಗ ಕವಿಯ ಪ್ರತಿಭಾ ದರ್ಶನಕ್ಕೆ ಸಾಕ್ಷಿಯಾಗಿ ಬಂದಿದೆ. ದಧೀಚಿಯೊಡನೆ ದಕ್ಷ ಮಾಡುವ ಸಂಭಾಷಣೆ, ವೀರೇಶನ ರೌದ್ರ ಮೂರ್ತಿಯ ಚಿತ್ರ ಬಹಳ ಸೊಗಸಾಗಿವೆ.

ಡಾ॥ ರಂ. ಶ್ರೀ. ಮುಗುಳಿಯವರು ಅಭಿಪ್ರಾಯಪಡುವಂತೆ[1] 'ವಿರೇಶ ಚರಿತೆ'ಯ ಕಥಾ ರಚನೆಯಲ್ಲಿ ರೌದ್ರರಸವನ್ನು ಏರೇರಾಗಿ ತೋರಿಸುವ ನೂತನತೆಯಿದೆ, ತೀವ್ರಗತಿಯಿದೆ. ನಾಲ್ಕು ಮಾತ್ರೆಯ ಉದ್ದಂಡ ಷಟ್ಪದಿ, ಉರುಬಿನ ಶೈಲಿ ಅದಕ್ಕೆ ಅನುಗುಣವಾಗಿಯೂ ಬಂದಿವೆ……… …. ಶಕ್ತಿ ಮದಾಂಧ ದಕ್ಷ, ಸರ್ವಶಕ್ತ ಶಿವ ಇವರ ಧ್ವನಿ ಒಂದು ರಮ್ಯ ಕಥೆಯಾಗುವುದರ ಬದಲು ಇದು ಇತರ ದೇವತೆಗಳಿಂದ ಶಿವ ಶ್ರೇಷ್ಠತೆಯನ್ನು ಸಾರುವ ಕಥೆಯಾಗಿ ಪರಣಮಿಸಿದೆ. ಮತೀಯ ದೃಷ್ಟಿಯಿಂದ ಇದು ಸಹಜ. ಆದರೆ ಉತ್ತಮ ಕಾವ್ಯ ದೃಷ್ಟಿಯಿಂದ ಗೌಣ………… ಮಿಾಸಲುಗವಿತೆ ಎಂದು ಇದಕ್ಕೆ ಕರೆದಿರುವುದು ಉದ್ದಂಡ ಷಟ್ಪದಿಯ ಹೊಸ ಪ್ರಯೋಗದಲ್ಲಿ ವೀರೇಶನ ರುದ್ರ ಕಥೆಯನ್ನು ಹೊಂದಿಸಿ ಹೇಳಿದ ನವೀನತೆಯನ್ನು ಕುರಿತೆಂದು ತೋರುತ್ತದೆ.

* * *

ಹರಿಹರನ ರಗಳೆಗಳು ಎಷ್ಟೇ ವಿನೂತನ ಪ್ರಕಾರವಾಗಿದ್ದರೂ ಅದರ ಛಂದಸ್ಸು ಬರುಬರುತ್ತಾ ಯಾರಿಗಾದರೂ ಬೇಸರ ತರಿಸುವುದು ಸಹಜ. ರಾಘವಾಂಕ ರಗಳೆಯನ್ನು ಕೈಬಿಟ್ಟದ್ದಕ್ಕೆ ಇದೂ ಒಂದು ಕಾರಣವಿರಬಹುದು.[2] ಹೀಗೆ ಹರಿಹರ ರಾಘವಾಂಕ ಇವರಿಂದ ಏಕಕಾಲದಲ್ಲಿ ಎರಡು ಪರಂಪರೆಗಳು ಹುಟ್ಟಿಕೊಂಡದ್ದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶೇಷ ಘಟನೆಯಾಗಿ ತೋರುತ್ತದೆ.[3] ರಾಘವಾಂಕ ಷಟ್ಪದಿಯನ್ನು ತನ್ನ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡುದಷ್ಟೇ ವಿಶೇಷವಲ್ಲ. ಷಟ್ಪದಿಯಲ್ಲಿ ಅವನು ಪ್ರಯೋಗಗಳನ್ನು ಮಾಡುತ್ತಿದ್ದಂತೆಯೂ ತೋರುತ್ತದೆ. ಹೀಗೆ 'ಕವಿ ಹೊಸದಾಗಿ ನಿರ್ಮಿಸಿಕೊಂಡಿರುವ ಉದ್ದಂಡ ಷಟ್ಪದಿಯ ಗಂಡುನಡಿಗೆ ಧೀರಭಾವ ಪ್ರಧಾನವಾದ (ವೀರೇಶ ಚರಿತೆ) ವಸ್ತುವಿಗೆ ಅತ್ಯಂತ ಉಚಿತವೂ ರಾಘವಾಂಕನ ನವನವೋನ್ಮೇಷಶಾಲಿಯಾದ ಪ್ರಯೋಗ ಪ್ರತಿಭೆಗೆ ಸಾಕ್ಷಿಯೂ ಆಗಿದೆ'.[4]

---

1. ಕನ್ನಡ ಸಾಹಿತ್ಯ ಚರಿತ್ರೆ (೧೯೬೪) ಪು. 191.
2. ಜಿ. ಎಸ್. ಶಿವರುದ್ರಪ್ಪ: ಪರಂಪರೆ ಮತ್ತು ರಾಘವಾಂಕ, ಪರಿಶೀಲನ ಪು. 50 (ಅಡಿಟಿಪ್ಪಣಿ)
3. ಅದೇ ,, ಪು. 50–51
4. ಅದೇ ,, ಪು. 61

ರಾಘವಾಂಕನಿಗೆ ಸಂಸ್ಕೃತ ಪ್ರಚುರವಾದ ಬರವಣಿಗೆ ಇಷ್ಟವಿಲ್ಲ ಎಂದು ಕಾಣು ತ್ತವೆ. ಅಂತಹ ಬರವಣಿಗೆ ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರೂ ಸಿಗದು. (ಆದರೂ ಅಲ್ಲೊಂದು ಇಲ್ಲೊಂದು ಅಪವಾದವಿದೆ. ಉದಾಹರಣೆಗೆ ಹರಿಶ್ಚಂದ್ರ ಕಾವ್ಯದಲ್ಲಿ ಗಂಗೆಯನ್ನು ಸುತಿಸುವ ಪದ್ಯವನ್ನು ನೋಡಬಹುದು.) ರಾಘವಾಂಕನ ಕಾವ್ಯದಲ್ಲಿ ಅಂದಿನ ಜನಬಳಕೆಯಲ್ಲಿದ್ದಿರಬಹುದಾದ ಗಾದೆ ಮಾತುಗಳಂತಹ ಮಾತುಗಳು ಹೇರಳವಾಗಿ ಸಿಗುತ್ತವೆ. 'ಮೆಣಸು ಹುಳಿತಡೆ ಜೋಳದಿಂ ಕುಂದೆ' 'ಅಲಗು ಕೂರಿತೆಂದೊಲೆಯೊಳಗಿಟ್ಟುರುಹಿದೊಡೆ ಕರಗದೇ' ಮುಂತಾದ ನುಡಿಗಟ್ಟುಗಳು ಅಲ್ಲಲ್ಲಿ ಮಿಂಚಿರುವುದನ್ನು ನೋಡಬಹುದು. ರಾಘವಾಂಕ ಒಳ್ಳೆಯ ಚಿತ್ರಗಳನ್ನು ಕೊಡುವುದರಲ್ಲಿಯೂ ನಿಸ್ಸೀಮ. ಅವನು ಕೊಡುವ ವೀರಬಾಹುವಿನ ಚಿತ್ರವನ್ನೇ ನೋಡಬಹುದು. ಅಸಹ್ಯ ಹುಟ್ಟುವಂತೆ ಅವನನ್ನು ಚಿತ್ರಿಸಿದ ಕವಿ 'ಬಿಡದೆ ಡಜ್ಜನೆ ತೇಗಿ ನೆರವಿಯಂ ಬಯ್ವ' ಎಂಬ ಮಾತಿನಿಂದ ವೀರಬಾಹುವಿನ ಚಿತ್ರಕ್ಕೆ ಜೀವವನ್ನು ತುಂಬಿ ಚಾಲನೆಯನ್ನು ಕೊಡುತ್ತಾನೆ. ರಾಘವಾಂಕನಲ್ಲಿ ಎದ್ದು ಕಾಣುವ ವಿಶೇಷ ಗುಣ ಎಂದರೆ ನಾಟಕೀಯತೆ ಒಂದೇ ಒಂದು ಪದ್ಯದಲ್ಲಿ ಹಲವಾರು ಸಂಭಾಷಣೆಗಳನ್ನು ತುಂಬುವ ಕೌಶಲ ಬಹುಶಃ ರಾಘವಾಂಕನಂತೆ ಬೇರೆಯವರಿಗೆ ಸಿದ್ಧಿಸಿಲ್ಲ ವೆಂದೇ ಹೇಳಬಹುದು. 'ರಾಘವಾಂಕನ ಅನನುಕರಣೀಯ ಶೈಲಿಯನ್ನು ಮುಟ್ಟಿದರೆ ಹಸುರೆಲೆಯ ಮೇಲಿರುವ ಶಿಶಿರ ಬಿಂದುವನ್ನು ಮುಟ್ಟಿದಂತಾಗು ತ್ತದೆ' ಎಂಬ ಕುವೆಂಪುರವರ ಮಾತು ಸತ್ಯ. ನಾಟಕೀಯತೆಯಲ್ಲಿ ರನ್ನನಿಗೆ ಹೊಯ್‌ಕಯ್ ಆದವನು ರಾಘವಾಂಕ.

'ರಾಘವಾಂಕ ಚತುರ್ಮುಖ' ಕವಿ ರಾಘವಾಂಕನ ಪ್ರತಿಭೆಯನ್ನು ಸಾರುವ ಅವನ ನಾಲ್ಕು ಕೃತಿಗಳ ಮುಖ್ಯ ಭಾಗಗಳ ಒಂದು ಸಂಕಲನ. ರಾಘವಾಂಕ ಕನ್ನಡದ ಶ್ರೇಷ್ಠ ಕವಿಗಳಲ್ಲಿ ಒಬ್ಬ. ಬಹುಮುಖ ಪ್ರತಿಭೆಯುಳ್ಳ ಕನ್ನಡದ ಕೆಲವು ಕವಿಗಳಲ್ಲಿ ಈತನೂ ಒಬ್ಬ. ಈತನ ಉಪಲಬ್ಧ ಕೃತಿಗಳು ಕೇವಲ ನಾಲ್ಕು. ಇವುಗಳಲ್ಲಿ ಹೊರಹೊಮ್ಮಿದ ಬಹುಮುಖ ಪ್ರತಿಭೆಯನ್ನು ಪರಿಚಯಿಸುವ ಪ್ರಯತ್ನವನ್ನು 'ರಾಘವಾಂಕ ಚತುರ್ಮುಖ' ದಲ್ಲಿ ನಾವು ಮಾಡಿದ್ದೇವೆ. ವಿದ್ವಾಂಸರು ಈಗಾಗಲೇ ಚರ್ಚಿಸಿರುವಂತೆ ಈತನ ಕೃತಿಗಳ ಸಂಖ್ಯೆ ಆರಕ್ಕೂ ಮೀರಿ ಇವೆ. ನಮ್ಮ ಉದ್ದೇಶ ಕವಿಯ ಶ್ರೇಷ್ಠ ಕೃತಿ

ಗಳಾದ ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಚಾರಿತ್ರ, ಸೋಮನಾಥ ಚಾರಿತ್ರ, ವೀರೇಶ ಚರಿತೆಗಳಲ್ಲಿ ಕವಿ ಸಮಾನ ಗುಣಗಳನ್ನೂ ಪರಸ್ಪರ ವಿರುದ್ಧ ಗುಣ ಗಳನ್ನೂ ಪಾತ್ರಗಳಲ್ಲಿ ಹೇಗೆ ಮೇಳವಿಸಿದ್ದಾನೆ ಎನ್ನುವ ಕಡೆಗೆ ವಿಶಿಷ್ಟವಾಗಿ ಸಾಗಿದೆ. ಹರಿಶ್ಚಂದ್ರನ ಸತ್ಯನಿಷ್ಠೆಯನ್ನು 'ಹರಿಶ್ಚಂದ್ರ ಕಾವ್ಯ'ದಲ್ಲಿಯೂ ಆದಯ್ಯದ ವೀರನಿಷ್ಠೆಯನ್ನು 'ಸೋಮನಾಥ ಚಾರಿತ್ರ'ದಲ್ಲಿಯೂ ಕಾಣು ತ್ತೇವೆ. ಚಂದ್ರಮತಿ ಹಾಗೂ ಪದ್ಮಾವತಿಯರ ಪಾತ್ರ ಎರಡೂ ಕಾವ್ಯಗಳಲ್ಲಿ ಸಮಾನಧರ್ಮವನ್ನು ಒಳಗೊಂಡಿದೆ. ಈರ್ವರೂ ಪರಮ ಸಾಧ್ವಿಯರು. ತಮ್ಮ ಪತಿಗಳ ಪ್ರತಿಜ್ಞೆಯ ಪೂರೈಕೆಗೆ ಕಾಯಾ ವಾಚಾ ಮನಸಾ ಸಹಕರಿಸಿದವರು. 'ಸಿದ್ಧರಾಮ ಚಾರಿತ್ರ'ದ ಬಿಲ್ಲೇಶ ಬೊಮ್ಮಯ್ಯ ಮೂರ್ಖ. ಗುರುವಿನ ಆಜ್ಞೆ ಯನ್ನೇ ಧಿಕ್ಕರಿಸಿದವನು. 'ವೀರೇಶ ಚರಿತೆ'ಯ ದಕ್ಷ ಮದಾಂಧ; ದೈವತ್ವ ವನ್ನೇ ಧಿಕ್ಕರಿಸಿದನು. ಹರಿಶ್ಚಂದ್ರ, ಆದಯ್ಯ–ಈ ಪಾತ್ರಗಳು ಅಲೌಕಿಕ ಪಾತ್ರಗಳಾದರೆ ಬಿಲ್ಲೇಶ ಬೊಮ್ಮಯ್ಯ, ದಕ್ಷ–ಈ ಪಾತ್ರಗಳು ಲೌಕಿಕ ಪಾತ್ರಗಳು. ಮೊದಲ ಬಗೆಯ ಪಾತ್ರಗಳನ್ನು ಇಂದು ನಾವು ಕಾಣಲು ಸಾಧ್ಯವಿಲ್ಲ. ಆದರೆ ಎರಡನೆಯ ಬಗೆಯ ಪಾತ್ರಗಳನ್ನು ನಮ್ಮ ಸುತ್ತ ಮುತ್ತ ನಾವಿಂದು ನೋಡಬಹುದಾಗಿದೆ.

ಅಲ್ಪ ಕಾಲದಲ್ಲಿ ನಮ್ಮ ಈ ಕೃತಿಯನ್ನು ತಪ್ಪಿಲ್ಲದೆ ಸುಂದರವಾಗಿ ಮುದ್ರಿಸಿದ ಲೋಟಸ್ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಪಾಟೀಲ್‌ರವರಿಗೆ ನಾವು ಆಭಾರಿಗಳಾಗಿದ್ದೇವೆ.

—ಸಂಪಾದಕರು

## ರಾಘವಾಂಕನೇಂ ಕೃತಕೃತ್ಯನೊ

ಶ್ರೀಪತಿಗೆ ಸೊಬಗನುಡುಪತಿಗೆ ಶಾಂತಿಯನು ವಾ
ಣೀಪತಿಗೆ ಚಾತುರ್ಯಮಂ ದಿವಸ್ಪತಿಗೆ ಪ್ರ
ತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ
ಮೂಲೋಕವಾವರಿಸುವ ।
ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾ
ಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಪಂ
ಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ
ಸಂತೋಷದಿಂದ ॥ ೧ ॥
ಶ್ರೀ ಮಹಾಗುರು ಬಲೋದಗ್ರವಿಗ್ರಹನಚಳ
ಸೋಮಧಾಮಾವೃತ ಜಟಾಪಟಲವೇಷನಾ
ಶಾಮಯ ಭಯಾತೀತ ನೂತನಾಂಗಂ ಮಂಗಳೋದಯ
ದಯಾಭರಿತನು ।
ಪ್ರೇಮದಿಂದೆಮಗೆ ಭಕ್ತಿಯನೀಗೆ ಶಿವಸಿದ್ಧ
ರಾಮನಭಿರಾಮನುದ್ದಾಮ ಜಿತಕಾಮನತಿ
ಭೀಮ ಸುಖಧಾಮ ಮಾಯಾಮಥನ ಸಂಗ್ರಾಮ
ಸೋಮಧರ ಸಲಹುಗೆಮ್ಮ ॥ ೨ ॥
ವಾಣಿಯಜೀವಿನ ಬೆಳಗು ಮುಕುತಿವನಿತೆಯ ಮುಡಿಯ
ಮಾಣಿಕಂ ಸರ್ವಮಂತ್ರಾದಿ ಪಂಚಾಕ್ಷರಿಯ
ಪ್ರಾಣ ಮಂಗಳದ ಮನೆ ದೇವಲೋಕದ ಜನ್ಮಭೂಮಿ
ತಾವರೆಗಣ್ಣಿನ ।
ರಾಣಿಯೆಸೆವೋಲೆವಾಗ್ಯಂ ಸರ್ವಸಿದ್ಧಿಗಳ
ತಾಣಂ ವಿರೂಪಾಕ್ಷನುನ್ನತೈಶ್ವರ್ಯದ
ಕ್ಷೋಣಿ ಪಂಪಾಂಬಿಕೆ ಮದೀಯಮತಿಗೀಗೆ ಪ್ರಸನ್ನ
ತೆಯನುತ್ಸವದೊಳು ॥ ೩ ॥

ವೇದ ನಾಲ್ಕಱೊಳು ಹದಿನಾಱು ಶಾಸ್ತ್ರಂಗಳೊಳು
ವಾದಿಸುವ ಹದಿನೆಂಟು ಪೌರಾಣದೊಳು ಕೇಳ್ದು
ಸಾಧಿಸಿದೆ ತಿಳಿದೆ ತೂಗಿದೆ ನೊರೆದೆ ನಾನಯ್ಯ ಶ್ರೀಗುರು
ವಿರೂಪಾಕ್ಷನ ।

ಪಾದವೇ ದಿವ್ಯವಿದಱೊಳಗೊಂದು ಕುಂದಿಲ್ಲ
ಭೇದಿಸುವೊಡೀ ಕೃತಿಗೆ ಪ್ರತಿಯಿಲ್ಲ ಹಂಪೆಯ ಮ
ಹಾದೇವನಾತ್ಮಜನ ರಾಘವಾಂಕನ ಕಾವ್ಯ ತರ್ಕಿಗಿಕ್ಕಿದ
ಮುಂಡಿಗೆ ॥ ೪ ॥

ಪರರೊಡವೆಯಂ ಕೊಂಡು ಕೃತಿಯು ಪೇಳದ ಭಾಷೆ
ಪರರ ಕಾವ್ಯಾರ್ಥಂಗಳ ಛಿದ್ರಿಸದ ಭಾಷೆ
ಪರರ ದೈವವ ನುತಿಸದಿಪ್ಪ ಭಾಷೆ ಪರರ ಕ್ಲೇಶವೀಕ್ಷಿಸದ ಭಾಷೆ ।

ಪರರ ನಿಂದಿಸಿ ತನ್ನ ಹೊಗಳಿಕೊಳ್ಳದ ಭಾಷೆ
ಪರರ ವಧುವಂ ಕಂಡು ಮನವೆಳಸದಿಹ ಭಾಷೆ
ಪರರ ವಸ್ತುವ ತೃಣಕೆ ಸರಿಯೆಂಬ ಭಾಷೆಯಿದು
ರಾಘವಾಂಕಗೆ ಸಂದುದು ॥ ೫ ॥

ನುಡಿ ಲಕ್ಷಣಾರ್ಥರಸಭಾವಜ್ಞರೆನಿಸುವು
ಗ್ಗಡದ ಕವಿಗಳ ಕಾವ್ಯದಿದಿರಲೇಕೋ ತನ್ನ
ಜಡಮತಿಯೊಳೀಶನಂ ಬಣ್ಣಿಸುವೆನೆಂದೆನ್ನ ನಗಲಾಗದೇ
ಕೆಂಡೊಡೆ ।

ಬಡವರ ಮನೆಯ ಸೊಡರು ಕಂದುವುದೇ ಗುಡ್ಡಿ ಹಸು
ಬಿಡೆ ಕಱೆದ ಹಾಲು ಕಹಿಯಪ್ಪುದೇ ಎನ್ನ ಕೃತಿ
ಪೊಡವಿಯೊಳು ಸಲುವುದಿದಕೇಕೆ ಸಂಶಯುವೆಲವೊ ನಂಬು
ನೀಡಿ ಕೈಯಾಣು ॥ ೬ ॥

ನಡೆವರೆಡಹದೆ ಕುಳಿತರೆಡಹುವರೆ ಕಾವ್ಯಮಂ
ನಡೆಸುವಾತಂ ರಸಾವೇಶ ಮರಹಾಲಸ್ಯ
ವೆಡೆಗೊಳಲು ತಪ್ಪುಗಲ್ಲದೆ ಕಾವ್ಯಕರ್ತೃ ತಾಂ ತಪ್ಪುವನೆ
ಒಂದೆಡೆಯೊಳು ।
ಎಡೆವಾಯ್ದು ಬಂದ ತಪ್ಪಂ ಹಿಡಿದು ಸಾಧಿಸದೆ
ಕಡೆತನಕ ಬಂದ ಲೇಸಿಂಗೆ ತಲೆದೂಗೆ ತಲೆ
ಯೊಡೆವುದೇ ಬೇನೆಯುಂಟಯದ ನೀರಸರನೇಕೆ ಪುಟ್ಟಿಸಿದ
ನಬುಜಭವನು ॥ ೭ ॥

ರಸ ಜೀವ ಭಾವವೊಡಲರ್ಥವವಯವ ಶಬ್ದ
ವಿಸರವೊಳುನುಡಿಯಲಂಕಾರವೇ ತೊಡಿಗೆ ಲ
ಕ್ಷಸಮೂಹ ಲಕ್ಷಣಂ ವಿಮಳ ಪದವಿನ್ಯಾಸ ನಡೆ ರೀತಿ
ಸುಕುಮಾರತೆ ।
ರಸಿಕನ ಮನಂ ಸುಳಿವ ಸುಖನಿಳಯವಾಗಿಪ್ಪ
ಹೊಸ ಕಾವ್ಯ ಕನ್ನಿಕೆಯ ಪಡೆದು ಪಂಪಾಂಬಿಕೆಯ-
ರಸ ವಿರೂಪಾಕ್ಷಂಗೆ ಕೊಟ್ಟ ಹಂಪೆಯ ರಾಘವಾಂಕನೇಂ
ಕೃತಕೃತ್ಯನೋ ॥ ೮ ॥

ಕವಿಯಧಿಕನಿರ್ದೊಡೇಂ ಕೇಳ್ವರಿಲ್ಲದೊಡೆ ಗಾ
ನವಿನೋದಿಯಿರ್ದೊಡೇಂ ಜಾಣರಿಲ್ಲದೊಡೆ ಜಾ
ತಿವಿದಗ್ಧೆಯಿರ್ದೊಡೇಂ ರಸಿಕರಿಲ್ಲದೊಡೆ ಪೊಸಪೂಮಾಲೆ
ಯಿರ್ದೊಡೇನು ।
ತವೆ ಮುಡಿವರಿಲ್ಲದೊಡೆ ನಾನಾ ಕಳಾನ್ವಿತರ
ನಿವಹವಿದ್ದೇನಾ ಕಲಾಪ್ರೌಢರಿಲ್ಲದೊಡೆ
ಇವನೆಯ್ದೆ ಬಲ್ಲವನಪೂರ್ವ ಮೇಣುಳ್ಳೊಡವ ದೇವನಲ್ಲದೆ
ಮನುಜನೆ ॥ ೯ ॥

## ೧. ಶಿವ ಮನಂ ನೋಳ್ಪನೈ

ಎಡವಿಡದೆ ದಾರಿಯಱಿಪಲು ಮಂತ್ರಿ ಮುಂದೆ ಸುತ
ನೆಡೆದ ದೆಸೆಯಲಿ ನಿಜಾಂಗನೆ ಹಿಂದೆ ಬರೆ ಭೂಮಿ
ಯೊಡೆಯನೊಡವೆಗಳೊಡೆತನಂಗಳನೊಡಂಬಟ್ಟು
ಮುನಿಗಿತ್ತ ಚಿಂತೆ ತನ್ನ।
ಬಿಡೆ ದಕ್ಷಿಣವ ಬಿಟ್ಟು ದಕ್ಷಿಣಾರ್ಥಂಗಳಂ
ಕೊಡುವೆನೆಂಬುತ್ತರವನುತ್ತರಿಸಲುತ್ತರಂ
ಬಿಡಿದು ನಡೆದಂ ನೆರವನಾರುವಂ ಹಾರದಾ ಧೀರ
ಕಾಂತಾರದೊಳಗೆ ॥ ೧ ॥

ಎನ್ನ ಸತ್ಯ ನಿಮಿತ್ಯವಾಯಸಂಬಡಲೊಲ್ಲೆ
ನೆನ್ನನತಿಗಾಳಿ ಚಳಿ ಬಿಸಿಲು ಹಸಿವೆಂಬಿವಂ
ಮುನ್ನ ಕಂಡಱಿಯರೀ ಸ್ತ್ರೀಬಾಲರಿವರು ಮೆಟ್ಟಲು
ಪಾದರಕ್ಷೆಯಿಲ್ಲ ॥
ಬೆನ್ನ ಮುಸುಕಲು ಸೀರೆಯಿಲ್ಲೆಡೆಯ ಸಂಬಳಕೆ
ಹೊನ್ನಿಲ್ಲ ಹಸಿದೆವೆನಲೇನೆಂಬೆ ನಡೆಗೆಟ್ಟ
ಡಿನ್ನು ನಿಲುವೆಡೆಯಾವುದೆಂದು ಹಲವಂ ಚಿಂತಿಸುತ್ತ
ಭೂಭುಜ ನಡೆದನು ॥ ೨ ॥

ಸುತನನಡಿಗಡಿಗೆತ್ತಿಕೊಂಬ ನಡೆಗೆಡುವ ನಿಜ
ಸತಿಯನಡಿಗಡಿಗೆ ಬೋಳೈಪ ಬಳಲುವ ಚಮೂ
ಪತಿಯನಡಿಗಡಿಗೆ ಬಿಡದುಪಚರಿಸುವ ಚಿತ್ತದಾವೇಶದಗ್ರದ
ಭರದಲಿ ।
ಅತಿಬಿಸಿಲು ಗಾಳಿ ಕಲು ಮುಳು ಕ್ಷುತ್ಪಿಪಾಸೆ ಜಾ
ಡ್ಯತೆಗಳೆಂಬಿಂತಿವಱ ಕಾಟದಿಂ ಮೊಳೆವ ಧಾ
ವತಿಯನಱಿಯದೆ ನಡೆದನಕಟಕಟ ಭೂಮಿಪಂ
ಕಾಲಕ್ಕೆ ಕೈ ಮುಗಿಯುತ ॥ ೩ ॥

ಭರದಿಂದ ನಡೆತಂದು ಕೂಡಿಕೊಂಡಂ ಮುನಿಯ
ತೆಱಕಾಱನಿಂದುವಂ ಬೆಂಬಿಡದ ರಾಹುವಿನ
ಪರಿಯೊಳಲ್ಲಿಂ ಹಿಂದೆ ಪಾಪಿ ಕೌಶಿಕನೆಂದಿನಿಂದ
ನೂರ್ಮಡಿ ಬಿಸಿಲನು ।
ತರಣಿಗಿತ್ತನಿಲನಂ ನಿಲಿಸಿ ಮುಂಬಟ್ಟೆಯೊಳು
ಗಿರಿಗಳಂ ದರಿಗಳಂ ಕಮ್ಮರಿಗಳಂ ಘೋರ
ತರುಗಳಂ ಮೆಳೆಗಳಂ ಖಗಮೃಗಂಗಳನಂದು
ನಿರ್ಮಿಸಿದನಾ ಮುನಿಪನು ॥ ೪ ॥

ಮೆಳೆಗಳೊಳು ಬಾಗಿ ಮರದೊಳು ಮುರಿದು ಮುರಿದಿಱಿಬಿ
ನೊಳು ಸುತ್ತಿ ಕುತ್ತುಱೆೊಳು ಹಣುಗಿ ಮಿಗೆ ಬೆಳೆದಿಡುಕು
ಱೊಳು ಕುಸಿದು ಹೊದಱಿನೊಳು ನುಸುಳಿ ನಳುವಿನೊಳಡಗಿ
ನಾಳಲೊಳುಪೊಕ್ಕು ಪಿರಿಯ ।
ಕುಳಿಯೊಳೊರ್ಗುಡಿಸಿ ಡೊಂಗರನನೇಱಿ ಸರುವುಗಳೊ
ಳಿಳಿದದಟುಗೆಟ್ಟು ಬೆಂಡಾದ ಸುಖಿಗಳನುಗ್ರ
ದಳಲ ಬೇಸಱ ಬೇಗೆ ಗಿಚ್ಚು ವಿಶ್ವಾಮಿತ್ರ ಮುನಿಯನೆಯ್ದದೆ
ಮಾಣದು ॥ ೫ ॥

ಬಳಿವಿಡಿದು ಕೈಗೊಡುವರಿಲ್ಲ ಕಟ್ಟುರಿವಿಸಿಲು
ಸುಳಿಯಲೀಯದು ಕಾಸಿದೊಲೆಯಂತೆ ನೆಲ ಕಾಲ
ನಿಳುಹಲೀಯದು ಹೊದ್ದುವಡೆ ನೆಳಲು ಮುಳ್ಳುಮುತ್ತುಱೆ
ದೈವ ಕಡೆಗಣಿಸಿದ ।
ಬಳಿಕಂದು ಜನನಾಥನಾಗಿಯುಂ ಜನಕೆ ಭೂ
ತಳನಾಥನಾಗಿಯುಂ ಭೂಮಿಗಕಟಕಟ ರವಿ
ಕುಲಜನಾಗಿಯು ರವಿಗೆ ತತ್ತ ಹೊತ್ತಿನೊಳನ್ಯನಾಗಿ
ತೋಱಿದನರಸನು ॥ ೬ ॥

ಬಸವಳಿಯುತುಸುರಲಮ್ಮದ ಸತಿಗೆ ಕೈಗೊಟ್ಟು
ಹಸಿದಳುವ ತನಯಂಗೆ ಹಣುಹಗಿಸನಿತ್ತು, ನಂ
ಬಿಸುತಿರಲು ಮಾರಿಯಂದದಿ ಬಂದು ತೆಱಕಾಱ ನನಗೆ ತಾ
ಭೋಜನವನು ।
ಬಿಸಿಲ್ಘು ಹೊಡೆದೊಡಲುರಿಯುತಿದೆಯೆಂದು ಜಱಿದು ದ
ಟ್ಟಿಸುತಡ್ಡಗೆಡೆದು ಕಾಲ್ವಿಡಿಯೆ ಬೇಡಿಲ್ಲಿ ಸಮ
ನಿಸುವುದೆಯೆನಲಿತ್ತು ಬಳಿಕ ಪೋಗೆಂದಾಣೆಯಿಟ್ಟ
ನಟ್ಟಡವಿಯೊಳಗೆ ॥ ೭ ॥

ಮೂಡಿದ ಶಶಾಂಕಂಗೆ ಮಱೆಯಾಗಿ ಮೋಡಮಂ
ಮಾಡಿ ಕೌಶಿಕನು ಕತ್ತಲೆಗೆ ಕೈವೀಸೆ ನಡು
ಗಾಡೊಳಗೆ ಕಾಡಿಗೆಯ ಸೋನೆವಳೆ ಸುರಿದುದಕಿನ್ನುಳಿದ
ಬಡ ಬಗೆಗಳು ।
ಬೇಡ ತಾನುಂಟೆಂಬುದಂ ತನ್ನ ತಾ ಮುಟ್ಟಿ
ನೋಡಿ ಕಂಡಡೆ ಕಂಡನಲ್ಲದುರ್ವಿಯ ಮಾತ
ನಾಡದಿರೆನಿಪ್ಪಂತೆ ಕಾಳಗತ್ತಲೆ ಕವಿದು ಕಡಲಿಟ್ಟು
ಮಡುಗಟ್ಟಿತು ॥ ೮ ॥

ಎಡಬಲದ ತೊಡೆಯೊಳೊಱಗಿರ್ದ ಸತಿ ಸುತರನಡಿ
ಗಡಿಗೆ ತಡವುತ್ತ ಮಂತ್ರಿಯ ಮಲಗಿಕೊಂಡು ನುಡಿ
ದಡೆ ದನಿಗೆ ಶರಭಶಾರ್ದೂಲವೆಯ್ತಂದು ಬಗಿವುವು
ಬಳಿಕ್ಕಾನು ಮುನಿಗೆ ।
ಕೊಡುವೊಡವೆ ಸಲ್ಲದೊಡಸತ್ಯನಾದಪನೆಂಬ
ಕಡುಚಿಂತೆಯಂಜಿಕೆಯ ಬಲದಿಂದ ಸುಮ್ಮನಿಹ
ಪೊಡವೀಶ್ವರಂಗಿನ್ನು ಮೇಲೆ ಬಹ ಸಂಕಟವನಾವ
ಜೀವರು ಕೇಳ್ವರು ॥ ೯ ॥

ನಡನಡನೆ ನಡುಗಿ ಕಣ್ಮುಚ್ಚಿ ತನ್ನೊಡಲನುಱೆ
ಬಿಡದಪ್ಪಿಕೊಂಬ ಸತಿಸುತರ ನಂಬಿಸಿ ಬಲಂ
ಗೆಡದೆ ಶಂಕರ ವಿರೂಪಾಕ್ಷ ಶರಣೆಂಬುದಡಿಗಡಿಗೆ
ಬುದ್ಧಿಗೊಡುವ ।
ಪೊಡವೀಶ್ವರನ ಕೂಡೆ ತೆಱಕಾಱನೆಂದ ನೀ
ನಡವಿಗುಱಿಯಾಗಲೇಕಿವರ ನೋಯಿಸಲೇಕೆ
ಕಡು ಮೂರ್ಖತನವ ಬಿಟ್ಟೆನ್ನಾದೊಡಂ ಮುನಿಪನೆಂದುದಂ
ಮಾಡೆಂದನು ॥ ೧೦ ॥

ಸುಡು ಮಾಣದಾವ ನೋವಿಂದೆಲ್ಲರಳಿವ ಕಂ
ಡಡೆ ಕಾಬೆನಲ್ಲದನ್ಯಾಯದಿಂ ನಡೆದೆನ್ನ
ಹಡೆದ ಕುಲಮಂ ಕೆಡಿಸಲಾಪನೇ ಎಲೆ ಮುರುಳೆ ನೀನೆನ್ನ
ಮನದನುವನು ।
ಅಡಿಗಡಿಗೆ ತುಡುಕಿ ತೋಡದಿರೆಂದು ಭೂಪಾಲ
ನುಡಿದಾತನಂ ನುಡಿವುತಿರಲು ಹೆಚ್ಚಿದ ರಾತ್ರೆ
ಕಡೆಗಂಡುದಂದುದಯಗಿರಿಯ ಮಸ್ತಕದ ಮೇಲರುಣ
ಕಿರಣಂ ಮೊಳೆತುದು ॥ ೧೧ ॥

ನೋಡೆ ಹಳ್ಳದೊಳಿಳಿದು ಕರಚರಣಶುದ್ಧಿಯಂ
ಮಾಡಿ ಸಂಧ್ಯಾವಂದನಂಗೆಯ್ದು ತರುಣ ಶಶಿ
ಚೂಡನಡಿದಾವರೆಯನರ್ಚಿಸಿ ಗುರುಸ್ಮರಣೆವೆರಸಿ
ಪ್ರಸಾದ ಫಲವ ।
ಸೂಡಿ ತನಯನನೆತ್ತಿಕೊಳುತ ಮಂತ್ರಿಯನು
ಮಾತಾಡಿಸುತ ಸತಿಯನೋವುತ್ತ ನಕ್ಷತ್ರಕನ
ಕೂಡುತ್ತರಂಗುಡುತರಣ್ಯಮಂ ನೋಡುತ್ತ ನಡೆದ
ಧೀರೋದಾರನು ॥ ೧೨ ॥

ಮುಂದ್ಯೆಪ ಬಿಸಿಲ ಬಿಸಿಯಿಂ ನೆತ್ತಿ ನೆಲನ ಬಿಸಿ
ಯಿಂದ ಕಾಲ್ ಕಡೆಗಣಿಸಿ ಕವಿವ ಕಾದೆಲರ ಬಿಸಿ
ಯಿಂದ ದೇಹಂ ಕ್ಷುಧಾನಲನ ಬಸಿಯಿಂದೊಳಗು ತೃಷೆಯ
ಬಿಸಿಯಿಂದ ಬಾಯಿ |
ಬೆಂದು ಬಿರಿದರಳುತ್ತ ಸಾಯುತ್ತ ನೋಯುತ್ತ
ನಿಂದು ನಡೆದಳುಕುತ್ತ ಬಳುಕುತ್ತ ಬರಬರಲು
ಮುಂದೆ ಬಳಿಕೇವೊಗಳ್ವೆನಕಟ ನಿಷ್ಕರುಣಮುನಿ ನೆನೆದ
ಕುಟಿಲದ ಕುಂದನು ‖ ೧೩ ‖

ಕುತ್ತುಱಾಗಿರ್ದ ಹೆಮ್ಮೆಳೆಗಳಂ ಸುಡುತ ಬೆಳೆ
ವೆತ್ತ ಬೆಟ್ಟವ ಸೀಳ್ದು ಸೆಕ್ಕೆಗಳೆಯುತ್ತ ಹುಲು
ವೆತ್ತ ನೆಲನಂ ಕರಿಕುವರಿಸುತ್ತ ಬೆಳೆದ ಮರದಿಡುಕುಱೊಳು
ನಿಂದುರುಹುತ |
ಹೊತ್ತುತ್ತ ಹೊಗೆಯುತ್ತ ಹಬ್ಬುತ್ತ ಹರಿದು ನೆಗೆ
ಯುತ್ತ ಗಗನವನು ತುಡುಕುತ್ತ ಮತ್ತಂತಡಿಸಿ
ಸುತ್ತ ಮುತ್ತಿತು ದಾವಾನಳನಸತ್ಯಕಾಂತಾರ
ದಾವಾನಳನನು ‖ ೧೪ ‖

ಹೆದಱಿ ಗಜಬಜಿಸಿ ಸತಿಸುತರ ಕೈವಿಡಿದು ನಿ
ಲ್ಲದೆ ಸಾರು ಮಾರಿ ಬಂದತ್ತು ನಡೆನಡೆಯೆಂದು
ಕದುಬಿ ಹರಿಹರದತ್ತಲಿತ್ತ ದಾರಿಯನಱಿಸುವನಿತಕೆಲ್ಲಾ
ದೆಸೆಯನು |
ಹೊದಿಸಿ ಕೈಕೊಂಡ ಬೇಗೆಯ ಬೇಗಮಂ ಕಂಡು
ಮದವಳಿದು ನಿಂದ ಭೂಪನ ಮೇಲೆ ಸಾಯಲಾ
ಱದೆ ನೊಂದು ಬೆಂದ ನಾನಾ ಖಗಮೃಗಂ ಕವಿದವೇನೆಂಬೆ
ನದ್ಭುತವನು ‖ ೧೫ ‖

ಮುಟ್ಟ ಕಾಶಿಯೆನು ಹೊಕ್ಕವನಲ್ಲ ಮುನಿರಿಣವ
ಕೊಟ್ಟಾತನಲ್ಲ ದಾನದ ಭೂಮಿಯಿಂದ ಪೊಱ
ಮಟ್ಟಾತನಲ್ಲಾಯು ತುಂಬಿ ಮಡಿದವನಲ್ಲ ಹೋಹಡಾ
ನೊಬ್ಬನಸುವ |
ಬಿಟ್ಟಾತನಲ್ಲ ನಿಜಸತಿಸುತರ್ ಮಂತ್ರಿ ಸಹ
ನಟ್ಟಡವಿಯೊಳಗೆ ದಳ್ಳುರಿ ಹೊಯ್ದು ದುರ್ಮರಣ
ವಟ್ಟು ಹೋಹಂತಾದುದೇ ಎಂದು ನೃಪತಿ ಮಱುಗುತ್ತ
ಮತ್ತಿಂತೆಂದನು ॥ ೧೬ ॥

ಕಡಗಿ ಕರ್ಬೊಗೆ ಸುತ್ತಿ ದಳ್ಳುರಿಗಳಲೆದು ಕೆಂ
ಗಿಡಿಗೆದಱೆ ಕೆಂಡಂಗಳರಸಿ ಸುಡೆ ಮಿಡುಮಿಡನೆ
ಮಿಡುಕಿ ಬಾಯ್ಬಿಟ್ಟೊಱಲಿ ಕೆಡೆದೊಡಲು ಮಡಿದು ಕೈ
ಕಾಲ್‌ಬೆಂದು ಸುಕ್ಕಿಸುಗಿದು |
ಮಡದಿ ಸುತರಳಿವುದನು ಕಣ್ಣಾರ ಕಂಡು ನಾಂ
ಕಡೆಯಲಲಿವುದಱಿಂದ ಮುನ್ನವೀ ಬೇಗೆಯೊಳ
ಗಡಗುವೆಂ ಹಿಡಿಯಬೇಡುಮ್ಮಳಿಸಬೇಡೆಂದು ನೃಪ
ಬೀಳಲನುವಾದನು ॥ ೧೭ ॥

ಭೋಗವಱಿಯದ ತರುಣನಂ ನಿಧಿಗೆ ಕೊಡೆ ತೃಪ್ತ
ನಾಗಿ ತನ್ನ ಕೊಡುವುದೆಂಬಾಗಳೆನ್ನನೀ
ಬೇಗೆಗಾಹುತಿಗೊಟ್ಟಡೆನ್ನಿಂದ ತಣಿದು ನಿಮ್ಮೆಲ್ಲರಂ
ತಲೆಗಾವುದು |
ಬೇಗ ಕಳುಹೆಂಬ ಸುತನಂ ನೋಡಿ ಸಾಮ್ರಾಜ್ಯ
ದಾಗನನುಭವಿಸಬೇಕಳಿಯಬೇಡೆನಲು ಭೂ
ಭಾಗದೊಡೆತನ ಕೌಶಿಕಂಗಾದುದಿನ್ನೇನನಾಳ್ವೆ ಭೂಭುಜ
ಎಂದನು ॥ ೧೮ ॥

ತೀದುದೇ ಮಾತು ದಳ್ಳುರಿ ಮಿಕ್ಕು ಮೀಱಿ ಬರು
ತೀದುದೆನಗಿತ್ತರೇ ಬೆಸನ ನೀವರಸ ಯೆಂ
ದಾ ದಿವ್ಯಸತಿಗೆಂದನವನಿಪ ಹರಿಶ್ಚಂದ್ರನುಳ್ಳ ಘನ ಸಿರಿ
ಸಂಪದ |
ತೀದ ಕಡೆಯೊಳು ತನ್ನ ಸತಿಸುತರ ಕೊಂದು ತಾಂ
ಹೋದನೆನಿಸದೆ ಪ್ರಾಣಭೀತಿಯಂ ಕಡೆಮುತ್ತಿ
ಬೀದಿವರಿವುರಿಗಬಲೆಯಂ ಕೊಟ್ಟನೆಂಬ ಕುಂದಂ
ಹೊಱುವನಲ್ಲೆಂದನು || ೧೯ ||

ಮುಳಿದು ಮೊಗೆದೆಲ್ಲರಂ ಕೊಲ್ಲದಿಂದೆನ್ನನೊ
ಬ್ಬಳನೆ ಕೊಂದಪುದೆ ಭೂಭುಜ ನಿಮ್ಮ ಕೂಡೆ ಸರಿ
ಯೊಳು ಜೀವವಂ ಬಿಡುವುದುಚಿತವಲ್ಲಿಂಬಳಿಕ ಬಿಡುವುದತ್ಯಧಮ
ತನವು |
ಎಳಸಿ ಮುತ್ತೈದೆತನದಲಿ ಮುಂದೆ ಹೋದಪೆಂ
ಕಳುಹಿ ಕೊಡಬೇಕೆಂದು ಮೈಯಿಕ್ಕಿ ಬೇಡಿಕೊಂ
ಡಳು ಗಂಡನಂ ಚಂದ್ರಮತಿ ಪತಿವ್ರತೆಯರಾನಂದ ನಿಧಿ
ಲಲ್ಲೆಗಱೆದು || ೨೦ ||

ದೆಸೆಗಳಿಗೆ ನಮಿಸಿ ದೈವಕ್ಕೆಱಗಿ ರವಿಗೆ ವಂ
ದಿಸಿ ಕೋಟಿಭವಭವದೊಳೆನಗೀ ಹರಿಶ್ಚಂದ್ರ
ವಸುಧೀಶನೇ ಗಂಡನಾಗಲಿ ದಿಟಂ ಲೋಹಿತಾಶ್ವನೇ
ಮಗನಾಗಲಿ |
ವಸು ಸತ್ಯಕೀರ್ತಿಯೇ ಮಂತ್ರಿಯಾಗಲಿ ತರುಣ
ಶಶಿಮೌಳಿಯೇ ದೈವವಾಗಲೆಮ್ಮಿಳೆಯ ಪಾ
ಲಿಸುವ ವಿಶ್ವಾಮಿತ್ರ ನಿತ್ಯನಾಗಲಿಯೆನುತ ಬೇಡಿ
ಕೊಂಡಿಂತೆಂದಳು || ೨೧ ||

ಪೊಡವೀಶ ಕೇಳುಭಯಕುಲಶುದ್ಧಿಯಲ್ಲದಿ
ರ್ದಡೆ ನಿನ್ನನಲ್ಲದನ್ಯರನು ಲೆಕ್ಕಿಸಿದೆನಾ
ದಡೆ ಹಿಂದೆ ನಿನಗೊಂದನಿಕ್ಕಿ ನಾನೊಂದನುಂಡಡೆ ಮೂಱು
ಕರಣವಱಿಯೆ।

ಮೃಡನಲ್ಲದನ್ಯದೈವಕ್ಕೆ ನಮಿಸಿದಡೆನ್ನ
ಪೊಡೆದು ಮುಕ್ಕುವುದು ದಾವಾಗ್ನಿ ಮೇಣಲ್ಲದಿ
ರ್ದಡೆ ಬಟ್ಟೆಗೊಟ್ಟಪುದು ಕೇಳೆಂದು ಬೊಬ್ಬೆಗೊಡುವಾ
ಪೊತ್ತನೇವೊಗಳ್ವೆನು ॥ ೨೨ ॥

ತರುಣಿಯ ಮನಂ ಬೆದಱಿಬೇಕೆಂದು ನೆಗೆದು ದ
ಳ್ಳುರಿ ಗಗನಮಂ ತೀವಿ ಸುತ್ತಿಮುತ್ತಿರೆ ಕಂಡು
ಹರಿದು ಹೊಕ್ಕಳು ಹೊಕ್ಕಳೆಲೆಲೆ ಶಿವಶಿವ ಮಹಾದೇವ
ಬಗೆಯದೆ ಹೊಕ್ಕಡೆ।

ತರುಣ ಸೂರ್ಯಂ ಕತ್ತಲೆಯನೆ ಹೊಕ್ಕಂತಾಯ್ತು
ನೆರೆದ ಕೌಶಿಕನ ಕೃತಕಾಗ್ನಿ ಹರೆದೋಡಿ ಭಾ
ಪುರೆ ಬಟ್ಟೆಗೊಟ್ಟುದೆಂಬಾಗಳುತ್ತಮರ ಮುಂದಾವ
ಠಕ್ಕಿರಲಾಪುದು ॥ ೨೩ ॥

ಸುರರ ಹೂಮಳೆಯ ತಂಪಿಂ ಬಿಸಿಯಾಱಿ
ತುರಿಯ ನೆವದಿಂ ಸತಿಯ ಶುಚಿತನವಱಿದು ಭೂ
ವರನಪ್ಪಿದಂ ಮಂತ್ರಿಯೆಱಗಿದಂ ಪುತ್ರನಲಿದಾಡಿದಂ
ಸಂತಸದಲಿ।

ಹರಕೃಪೆಯೊಳಗ್ನಿಭಯವೆಂತಕ್ಕಿದೊಮ್ಮಿಂಗೆ
ಪರಿಹರಿಸಿತುಗ್ರ ಮುನಿಗಿತ್ತವಧಿ ಸನಿಹವಾ
ಯ್ತಿರಬಾರದುರವಣಿಸಿ ನಡೆನಡೆಯೆನುತ್ತ ಹರಿತಂದು ವಿಂಧ್ಯವ
ಕಳೆದರು ॥ ೨೪ ॥

ಹಲವು ನಗರಂಗಳಂ ಹಲವರಣ್ಯಂಗಳಂ
ಹಲವು ಗಿರಿಗಳ ಕಳಿದು ನಡೆತರಲು ಮುಂದೆ ಸುತ
ಕಲಿಮಲ ಕುಲಾಪಕರ್ಷಣೆಯಾನು ವಿಪುಳ ಪಾತಕಕೋಟಿ
ಕೋಟಿಯೆಂಬ |
ಜಲಜವನ ಚಂದ್ರಕಳೆಯೊಾಸು ಭವಭಯ ಕುಧರ
ಕುಲಿಶಾಭಿದಾನೆಯೊಾನಂದು ಧರೆಗಬುಪಲೆಂ
ದುಲಿವಂತೆ ಘುಳುಘುಳು ಧ್ವಾನದಿಂದೆಸೆವ ಗಂಗಾನದಿ
· ವಿರಾಜಿಸಿದಳು ॥ ೩೫ ॥

ಭವಭಯಾಂಬುಧಿಯನುತ್ತರಿಸುವಂತುತ್ತರಿಸಿ
ಯವಗಾಹವಿರ್ದುಂ ಕೃತಾರ್ಥತೆನೆಯ್ದುತಿ
ಪ್ಪವರನೀಕ್ಷಿಸಿ ಗಂಗೆ ಹೆಚ್ಚಿದಳು ನರಕಿಗಳು ತನ್ನೊಳಗೆ ತೊಳೆದ
ದೋಷ |
ತವಿಲಾದುದಿಂದು ಪತಿಹಿತವೆಯಹ ಸುದತಿಯನ್ನ
ತವನಟಿಯದವನೀಶನುಭಯ ಕುಲಶುದ್ಧನಹ
ಕುವರನೀ ಸ್ವಾಮಿಹಿತವನಹ ಮಂತ್ರಿಯ ಸೋಂಕು ತನಗೆ
ಕೈಸಾರ್ದುದೆಂದು ॥ ೨೬ ॥

ಮರುಜೀವಣಿಯನು ಸವಿದಮೃತಮಂ ಕುಡಿದಂತೆ
ಸುರಕುಜವ ಸಾರ್ದು ಪರುಷವ ಮುಟ್ಟಿದಂತೆ ಗುರು
ಕರುಣವಂ ಪಡೆದು ಲಿಂಗವಂ ಪಿಡಿದಂತೆ ನೆನೆವವರ
ದುರಿತಾರಣ್ಯವ |
ಉರುಹಲು ಸಮರ್ಥೆಯಹ ಗಂಗೆಯೊಳು ಮಿಂದು ಭಾ
ಸುರವಾರಣಾಸಿಯುಂ ಹೊಕ್ಕನುತ್ತಮ ನೃಪಂ
ಪರಮ ಪ್ರಸಾದವೊಲವಿಂದ ಸದ್ಭಕ್ತನುದರವನು
ಪೊಗುವಂತಾಗಳು ॥ ೨೭ ॥

ಮುಗಿಲ ಬಸುಱಿಂ ಬಗಿದು ನೆಗೆದೊಗೆದು ಮಿಾಱಿ ಮೆಱೆ
ವಗಣಿತ ವೃಷಧ್ವಜಂಗಳ ಸೂರ್ಯ ಕೋಟಿಯಂ
ತೆಗೆದವೆಂಬಂತೆ ಮಾರ್ಪೊಳೆವ ಹೊಂಗಳಸಂಗಳೆಸೆವ
ಶಿವನಿಳಯಂಗಳ ।
ಸೊಗಸಿಗೆಡೆಯಾಡಿಯಾಡುತ ಪಾಡುತೆಯ್ತಪ್ಪ
ಪೊಗಳಿ ಪೊಡೆಮಡುವ ಬಲಗೊಂಬ ನೋಡುವ ನಲಿವ
ನಗುವ ನಾನಾ ಜನವನೊತ್ತರಿಸಿ ನಡೆತಂದು ವಿಶ್ವಪತಿಯಂ
ಕಂಡನು ॥ ೨೮ ॥

ನೋಡಿ ಪರಮಾನಂದ ಮೂಡಿ ಸುಖರಸದೊಳೋ
ಲಾಡಿ ಕೀರ್ತಿಸಿ ಹರಿಸಿ ಹಾಡಿ ಸದ್ಭಕ್ತಿಯಂ
ಬೇಡಿ ಮನದೊಳಗೆ ಮಾತಾಡಿ ನೆಱೆ ಬಿನ್ನಹಂ ಮಾಡಿ
ಪ್ರಸಾದ ಫಲವ ।
ಸೂಡಿ ಪರಿಣಾಮವಂ ಮಾಡಿ ದುಃಸ್ಥಿತಿಯನೀ
ಡಾಡಿ ಭವಜಲವನೀಸಾಡಿ ಬಲ್ಪಿಂ ಮನಂ
ಮೂಡಿ ಬೀಳ್ಕೊಂಡು ಸಂತಸದಿ ಮರಳಿದನುಳಿದ
ಲಿಂಗಂಗಳಂ ನೋಡುತ ॥ ೨೯ ॥

ಗಡಿಗೆಟ್ಟ ಲಿಂಗಂಗಳೊಪ್ಪಕ್ಕೆ ಭೋಗಂಗ
ಳಡಕಕ್ಕೆ ಮಂಗಳದ ಮಸಕಕ್ಕೆ ರಚನೆಗಳ
ಸಡಗರಕೆ ಬೆಱಗಾಗುತೆಲ್ಲಾ ನಿರೋಧಮಂ ಮಱೆದು
ನೋಡುತ್ತರಸನು ।
ನಡೆಯುತಿರಲಿದಿರೆದ್ದು ಮಾರಿಯಂದದಿ ಬಂದು
ಕೊಡು ಹೊನ್ನನಿನ್ನು ತಳುವಿದಡೆನ್ನ ಪತಿಯೆನಗೆ
ಕಡುಮುಳಿವನೆಂದು ಜಱೆಯುತ್ತ ನಕ್ಷತ್ರಕಂ ತುಡುಕಿ ಸೆಱಗಂ
ಪಿಡಿದನು ॥ ೩೦ ॥

ತಪ್ಪದೀ ಪರಿಯೊಳಿಲ್ಲ ದೇವರಂ ನೋಡು
ತಿಪ್ಪೆನೆನಲೊಂದು ಮಾಸಂ ನೆಱೆಯದಿಲ್ಲಿಗೈ
ತಪ್ಪೆನ್ನಗಂ ಸೈರಿಸಿದೆನು ನೀನೆನಗೆ ಕೊಟ್ಟವಧಿಯಿಂದಿನ
ದಿನದಲಿ।
ಒಪ್ಪೆ ಸಂದಪುದೀಗ ಕೊಡು ಹೊನ್ನನಲ್ಲದೊಡೆ
ಮುಪ್ಪಹುದು ನಿನ್ನ ಸತ್ಯಕ್ಕೆಂದು ನೂಕಿ ತಂ
ದುಪ್ಪರದ ಬಿಱುಬಿಸಿಲ ಬೀದಿಯೊಳು ತೆಗೆದನವನನಿಬರಂ
ನಿಷ್ಕರುಣನು ॥ ೩೧ ॥

ಕೊಟ್ಟವಧಿಯಂ ನೆನೆದು ನೋಡಿ ಹವ್ವನೆ ಹಾಱಿ
ಮುಟ್ಟಬಂದುದು ದಿನಂ ಕೈಕೊಂಡ ತೆಱದವಂ
ಕಟ್ಟುಗ್ರನಭ್ಯಾಸದವರಿಲ್ಲ ಚಾಚಲಡಪಿಲ್ಲ ನಾಂ
ಕುಲಧರ್ಮವ।
ಬಿಟ್ಟು ತಿರಿವವನಲ್ಲ ವೋಲೈಸಿ ನೆಱೆ ಲಜ್ಜೆ
ಗೆಟ್ಟು ಬೇಡವೊಡಿಲ್ಲಿ ದೊರೆಯಿಲ್ಲ ಕೃಷಿಯಿಂದ
ಹುಟ್ಟಿಸುವೆಂಬಡೆಡೆಯಿಲ್ಲವಿನ್ನೇಗೆಯ್ವೆನೆಂದು ಮಱುಗಿದ
ನರಸನು ॥ ೩೨ ॥

ಏಗೆಯ್ವೆ ಚಿಂತಾಗ್ನಿಯುರಿಯ ಹೊಯ್ಲಿಂ ಕರಗಿ
ಹೋಗದಿರನೆಚ್ಚರಿಸಬೇಕೆಂದು ಸತಿಯವಧಿ
ಮೇಗರಡು ಜಾವವಿದಱೊಳಗೆ ತಿದ್ದುವ ಬುದ್ಧಿಯಂ
ಕಾಣಬೇಕಲ್ಲದೆ।
ಮೂಗುವಟ್ಟಿರ್ದಡೇನಹುದೆಂದಡಿರದೆ ಬಳಿ
ಕೇಗೆಯ್ವೆ ಪೇಳೆನಲು ಸಾಲದೊಳು ಪೋದನಿತು
ಪೋಗಲೆಮ್ಮಿಬ್ಬರಂ ಮಾಱಿ ಬಳಿಕುಳಿದುದಂ ಕಾಣು ನಡೆನಡೆ
ಎಂದಳು ॥ ೩೩ ॥

ಕಡುನಿರೋಧಂಗೊಳಿಸಿ ದೇಶದಿಂ ಪರದೇಶ
ಕೊಡವರಿಸಿತಲ್ಲದಾಸಿರ್ದು ನಿಮ್ಮಂ ಮಾಱು
ಗೊಡಲಾಪೆನೇ ಎಂದಡೆಲೆ ಮರುಳೆ ಸರ್ವಕ್ಕೆ ಮೊದಲು
ಸತಿಸುತರು ತನ್ನ ।
ಒಡಲು ಕಡೆ ನೇಮಕ್ಕೆ ಸತ್ಯಕ್ಕೆ ಬಂಧನ
ಕ್ಕೆಡೆಯಲಳುಪಲು ಶಿವ ಮನಂ ನೋಳ್ಪನ್ಯೆ ಲಜ್ಜೆ
ಗೆಡದೆಮ್ಮ ಮಾಱು ಮತ್ತಾದುದಾಗಲಿ
ಎಂದಡವನಿಪನೊಡಂಬಟ್ಟನು ॥ ೩೪ ॥

ಪೊಡವಿಪಂ ಸತಿಸುತರ ತಲೆಗಳಲಿ ಹುಲುಗಟ್ಟಿ
ನಡೆನಡೆದು ಕೈವಿಡಿದು ಮುಂದೊಡ್ಡಿ ತೋಱುತಂ
ಗಡಿಗಳೊಳು ಬೀದಿಯೊಳು ಸಂದಿಯೊಳು ಪುರದೊಳೋರಂತೆ
ನಾಚಿಕೆಯನುಳಿದು ।
ಪೊಡವಿಪ ಹರಿಶ್ಚಂದ್ರ ಭೂವರನ ತನಯನಂ
ಮಡದಿಯಂ ಮಾಱುಗೊಂಬಧಿಕರಿಲ್ಲಾ ಎಂದು
ನಿಡುಸರದೊಳೊಱಲಿ ಜನಕಱುಪುತ್ತ ತೊಳಲಿದಂ
ಸತ್ಯನಿಧಿ ಭೂಪಾಲನು ॥ ೩೫ ॥

ಅನಿಮಿತ್ತ ಮುನಿವ ಮನಿಪನ ಬೆಸದೊಳಗ್ನಿ ವಿ
ಪ್ರನ ವೇಷದಿಂದ ಬಂದಾವಾವ ಸತಿಪುತ್ರ
ರೆನಿಪರವರೆಂದಡಿವರಿಬ್ಬರೆನಲಿವನಬಲನೀವನಿತೆ ಮುಪ್ಪಿನವಳು ।
ಮನೆಯೊಳಿನ್ನೊಳ್ಳಿತಹರಾರುಂಟು ತಾಯೆಂದ
ಡೆನಗುಳ್ಳರಿವರಯ್ಯ ಕೊಂಡೆನ್ನ ಸಾಕಿಕೊ
ಳ್ಳೆನೆ ಬೆಲೆಯ ಹೇಳೆನಗೆ ಲಾಗಾಗೆ ಹೊಂಗೊಡುವೆನೇಳೆಂಟು
ದಿನಕೆಂದನು ॥ ೩೬ ॥

ಇಂದು ಬೈಗಿಂದೊಳಗೆ ರಾಸಿ ಹೊನ್ನಂ ಕೊಡುವೆ
ನೆಂದು ಭಾಷೆಯನಿತ್ತೆನೀಯದಿರ್ದಡೆ ಹಾನಿ
ಬಂದಪುದು ಲಾಗನಱಿಸದೆ ನಿನ್ನ ಮನಕೆ ಬಂದನಿತರ್ಥಮಂ
ಕರುಣಿಸು |
ತಂದೆಯೆನೆ ವನಿತೆಗಿಪ್ಪತ್ತು ಸಾವಿರವನೀ
ನಂದನಂಗಿಪ್ಪತ್ತು ಸಾವಿರವನೀವೆನೆನೆ
ಬಂದುದೆನಿಸುವುದೆಮ್ಮ ತೆಱಕಾರಗೆಂದೆನಲು
ಬಂದುದೆನಿಸಿದನಾಗಳು || ೩೭ ||

ಬಂದುದೇ ನಕ್ಷತ್ರನಾಮ ಮುನಿ ಎನಲೇನು
ಬಂದುದಾಂ ಬಂದ ದಿನ ಮೊದಲಿಂದುತನಕೆನ್ನ
ಹಿಂದುಳಿದ ಬತ್ತಾಯ ಬಂದುದೆನ್ನೊಡೆಯಂಗೆ ಕೊಡುವ ಹೊಸ
ರಾಸಿ ಹೊನ್ನ |
ತಂದೀಗ ಕೊಡು ಕೊಡದೊಡಿಲ್ಲೆನ್ನು ಹೋಗಬೇ
ಕೆಂದಡೀ ಹೊನ್ನ ಬತ್ತಾಯಕ್ಕೆ ತೆಱುವನ
ಲ್ಲೆಂದಡೀ ಮಧ್ಯಸ್ಥ ವಿಪ್ರ ಮೆಚ್ಚಲು ಕೊಂಬೆನವನೀಶ
ಕೇಳೆಂದನು || ೩೮ ||

ಈತನಿನಿತರ್ಥಮಂ ಕೊಂಬುದುಚಿತವೇ ಹೇಳು
ತಾತ ಪಕ್ಷೀಕರಿಸದೆಂದೆನಲು ನಾಲ್ಕೆರಡು
ಮಾತಂಗದುದ್ದದರ್ಥದ ಸಾಲವಂ ಬೇಡಬಂದವಂಗಿನಿತು
ಘನವೇ |
ಭೂತಳಾಧಿಪ ಮುನಿದು ಪೇಳೆನಿರ್ದುದನೆಂಬೆ
ನೀತಗಿದು ಮರಿಯಾದೆಯೆನೆ ಜಲವನುಳಿದಬುಜ
ಕಾ ತರಣಿ ಮುನಿವನೆನೆ ನೆಲೆಗೆಟ್ಟು ಬಂದವರ್ಗೆ
ಮುನಿಯುದವರಾರೆಂದನು || ೩೯ ||

ವಿನಿಯದಿಂ ಕಂಡುದಂ ನುಡಿದಡೆನ್ನಂ ನಿನಗೆ
ಮುನಿದನೆಂದೆಂಬೆ ನೀಂ ಮುನಿದು ಮಾಡವುದೇನು
ಜನಪ ಎಮ್ಮೊಡವೆಯಂ ಕೊಂಡೀಗ ಹೋಹವೆಂದೇಳೆಲೆಗೆ
ಸವುಡಿದೊತ್ತಿ ।
ಮನೆಯ ಕೆಲಸಕ್ಕೆ ನಡೆ ಹುಲು ಹುಳ್ಳಿತರಲು ಕಾ
ನನಕೆ ಹೋಗೇಳೆಲವೊ ಚಿಣ್ಣ ಎಂದಕಟ ಮಾ
ನಿನಿಯಂ ಕುಮಾರನಂ ಜಱಿದನಾ ಕಪಟವಟುವೇಷಮಯದ
ನಿಲಸಖನು ॥ ೪೦ ॥

ಹೋಹೆನೇ ತಂದೆ ಬೊಪ್ಪಯ್ಯ ಎಂದೆಂದು ಕಡು
ನೇಹದಿಂದಪ್ಪಿ ಕರುಣಂದೋಱ ಕಂಬನಿಯ
ಕಾಹೊನಲೊಳದ್ದುವ ಕುಮಾರನಂ ಕಾಲ್ಗೆಱಗಿ ತಲೆವಾಗಿನಿಂದ
ಸತಿಯ ।
ಬೇಹೊಡೆಯ ನಾನಿರಲು ಮಾಱದವನಂ ಕೇಳ್ವ
ಸಾಹಸವ ನೋಡೆಂದು ಕೆಡೆಹೊಯ್ದು ನೂಕಿ ನಿಜ
ಗೇಹಕ್ಕೆ ಜಱಿಯುತ್ತ ಕೊಂಡೊಯ್ವನವನಿಪನ ಮನ
ಮಱುಗಬೇಹುದೆಂದು ॥ ೪೧ ॥

ಧುರದೊಳಗೆ ಕಾದಿ ಜೂಜಾಡಿ ಸೋಲದೆ ಸವಿ
ಸ್ತರಮಪ್ಪ ಸಿರಿಹೋಯ್ತು ಪುರ ಹೋಯ್ತು ಧರೆ ಹೋಯ್ತು
ಪರಿವಾರ ಹೋಯ್ತು ನಿಷ್ಕಾರಣಂ ನಾರಿ ಹೋದಳು ಕುಮಾರಂ
ಹೋದನು ।
ಉರಿಮಾರಿಯವಧಿ ಬಂದುದು ಋಣವನಿನ್ನಾವ
ಪರಿಯೊಳುತ್ತರಿಸಿ ಶುಚಿಯಹೆನು ದುಷ್ಕರ್ಮ ವಿ
ಟ್ಟೊರಸುತಿದೆ ಮೇಲೇನುಗತಿಯೆಂಬ ಭೂಪಂಗೆ
ಮಂತ್ರೀಶನೆಂತೆಂದನು ॥ ೪೨ ॥

ಸಂಗರದೊಳೀರೇಳು ಲೋಕದರಸುಗಳ ಸ
ಪ್ತಾಂಗಮಂ ಕೊಂಬ ನಿನ್ನಂ ನುಡಿಯ ತೊಡಕಿನ ಬೆ
ಡಂಗಿನಿಂ ಸೋಲಿಸಿ ಸಮಸ್ತ ರಾಜ್ಯವನು ಬಡಮುನಿ ಕೊಂಡು
ಮೇಲೆ ಋಣವ ।

ಹೊಂಗಿಸಿ ತಗುಳ್ವದಿದು ದೈವಿಕಂ ದುಷ್ಕರ್ಮ
ದಂಗವಲ್ಲೀಶ್ವರ ಮನಂ ನೋಡಿದಪನು ಧೈ
ರ್ಯಂಗೆಡದೆ ನಡೆಯೆ ಲೇಸೊಡೆಯರಱಿಯದ ಬಿಟ್ಟಿಯಲ್ಲರಸ
ಚಿತ್ತೈಸೆಂದನು ॥ ೪೩ ॥

ಖಗವಂಶದಿಕ್ಷ್ವಾಕು ಭೂವರನ ಪೀಳಿಗೆಯೊ
ಳೊಗೆದ ತ್ರಿಶಂಕು ವಸುಧಾಧಿ ನಾಯಕನ ಹೆ
ಮ್ಮಗ ಹರಿಶ್ಚಂದ್ರನಂ ಮಾಱುಗೊಂಡೋಲೈಸಿ ಕೊಂಬರಿಲ್ಲಾ
ಎನುತ್ತ ।

ಬಗೆಬಗೆಯ ಪುರದ ಕೇರಿಯ ಮನೆಯೊಳಡ್ಡ ಬೀ
ದಿಗಳ ಬೀದಿಯ ನಿಂದ ನೆರವಿಗಳ ಜನಮುಮಂ
ಮಿಗೆ ಕೇಳಿಸುತ್ತ ತೊಳಲಿದನು ಮಧ್ಯಾಹ್ನ ಮೊದಲಾಗಿ
ಕಡೆ ಹಗಲ ತನಕ ॥ ೪೪ ॥

ಮಡದಿಯರನಿರಿಸಿಕೋ ಎಂದು ನಾಂ ಬೇಡಿಕೊಂ
ಡಡೆ ಮಿಱಿ ಹೊಲತಿಯರನೊಲ್ಲೆನೆಂಬಣ್ಣನಂ
ಕಡೆಗನಾಮಿಕನ ಕಿಂಕರನಾಗಿ ಸುಡುಗಾಡ ಕಾವಂತೆ
ಮಾಳ್ಪೆನೆಂದು ।

ಕಡು ಮೂರ್ಖ ಕೌಶಿಕಂ ಕಾಲನಂ ಕರೆದು ನೀಂ
ಬಿಡದನಾಮಿಕನಾಗಿ ಧನವನಿತ್ತರಸನಂ
ತಡೆಯೆಂದು ಮುನ್ನೊಂದು ತಿಂಗಳಿನೆ ಕಳುಹೆ ಬಂದಾ ಹೊತ್ತ
ಹಾರಿರ್ದನು ॥ ೪೫ ॥

ಪಿಡಿದ ಸಂಬಳಿಗೋಲು ಕಾರೊಡಲು ಕೆಂಗಣ್ಣು
ಕುಡಿದು ಕೊಬ್ಬಿದ ಬಸುಱು ದಡದಡಿಸಿ ತರಹರಿಸು
ವಡಿಯು ಕೆಡಱಿದ ತಲೆಯನಡಸಿ ಸುತ್ತಿದ ಮುಪ್ಪುರಿಯ
ಬಾರಿಕಡ್ಡಣಿಗೆಯ ।
ಬಿಡದೆ ಡಬ್ಬನೆ ತೇಗಿ ನೆರವಿಯಂ ಬಯ್ವ ಬಿಱು
ನುಡಿಯ ಕಲಿ ವೀರಬಾಹುಕ ಬರುತಂ ಮಾಱು
ವೊಡೆ ಕೊಂಡು ಹೊಂಗೊಡುವೆ ನಾನೆಂದು ತನ್ನ ಹಡಪಿಗನಿಂದ
ಕೇಳಿಸಿದನು ॥ ೪೬ ॥

ಕೊಡುವಾತನಾರು ಬೆಲೆಯೇನು ಮಾಱಿಸಿಕೊಂಬ
ಪೊಡವೀಶನೆಂಬನಾರೋ ವೀರಬಾಹು ಕೇ
ಳ್ದಡೆ ಕೊಂಬನೀಗಳೆಂದೆನೆ ನೃಪಂ ಬೆಱಗಾಗಿ
ಸೂರ್ಯವಂಶದಲಿ ಹುಟ್ಟಿ ।
ಮೃಡಮೂರ್ತಿ ವಾಸಿಷ್ಠಮುನಿಯ ಕಾರುಣ್ಯಮಂ
ಪಡೆದೆನ್ನನೀ ಹೊಲೆಯ ಮಾಱುಗೊಂಡಪನೆಂಬ
ನುಡಿವ ಬಲುಹಂ ನೋಡು ನೋಡೆಂದು ಕಡುಮುಳಿದು
ಕೋಪಿಸಿದನವನೀಶನು ॥ ೪೭ ॥

ನಡುಗದಂಜದೆ ಹೆದಱದೋಸರಿಸದಕಟಕಟ
ಕಡೆಯ ಹೊಲೆಯಂ ಮೇರೆದಪ್ಪಿ ಬಂದೆನ್ನ ತ
ನ್ನೊಡೆಯಂಗೆ ದಾಸನಾಗೀಗಳೆಂದೆಂಬುದಿದು ಕಾಲಗುಣವೊ
ಎನ್ನನು ।
ಎಡೆಗೊಂಡ ಕರ್ಮಫಲವೋ ಕಡೆಗೆ ಮೆಣಸು ಹುಳಿ
ತಡೆ ಜೋಳದಿಂ ಕುಂದೆ ನೋಡು ನೋಡೆಂದು ಘುಡು
ಘುಡಿಸಿ ಕೋಪಾಟೋಪದಿಂ ಜಱೆದು ಝುಂಕಿಸಿದನವನಿಪ
ಸೇನಾಮುಖನನು ॥ ೪೮ ॥

ಕೇಳಿ ಬಂದಾರ ಜಱೆದಪೆಯೆನಲು ನಿನ್ನ ಹಡ
ಪಾಳಿಯುನದೇಕೆನ್ನನಱೆದಱೆದನಾಮಿಕಂ
ಗಾಳಾದಪಾಯೆಂದು ನುಡಿದನಿಂತೆನಬಹುದೆ ಕೀಳು ಮೇಲಂ
ನೋಡದೆ ।
ಕೀಳಾರು ಮೇಲಾರು ಹದುಳವಿಪ್ಪಾನು ಚಾಂ
ಡಾಳನೋ ಹುಸಿಯ ಹೊಲೆಯಂ ಹೊಱುವ ನೀನು ಚಾಂ
ಡಾಳನೋ ಹೇಳೆಂದೊಡಾನೀಗ ಹುಸಿದುದೇನೆಂದನು
ಹರಿಶ್ಚಂದ್ರನು ॥ ೪೯ ॥

ಹೊನ್ನುಳ್ಳ ಧನಿಕರಾರಾದೊಡಂ ಕೊಂಬವರ್
ಬನ್ನಿಯೆನ್ನಂ ಮಾಱುಗುಡುವೆನೆಂದೆನೆ ದಿಟಂ
ನನ್ನಿಯುಳ್ಳವನೆಂದು ಬಗೆದು ಬೇಡಿದೆನುತ್ತಮ ದ್ವಿಜರು
ಕೊಂಬುದೆಂದು ।
ಮುನ್ನ ನೀನಾಡಿತುಂಟೇ ಹೇಳು ಭೂಪಾಲ
ನಿನ್ನ ನುಡಿ ನಿನಗೆ ಹಗೆಯಾಯ್ತೆ ಕಂಡುದನಲ್ಲ
ದೆನ್ನನೀ ಹೊಲೆ ಹುಸಿಯ ಹೊಱುವವಂ ಹೊಲೆಯನಲ್ಲದೆ
ಬಳಿಕ್ಕಾರೆಂದನು ॥ ೫೦ ॥

ದೊರೆಗೆಟ್ಟು ಹುಸಿದೊಡಂ ನರಕ ರಾಜ್ಯಾಂತರಂ
ನರಕವರಸುಗಳಿಗಾದೇಶವೆಂದೆನೆ ನರಕಿ
ನರಕಕ್ಕೆ ತೆಕ್ಕುವೆನೆ ನಿನ್ನೊಡನೆ ನುಡಿದು ದೋಷವ
ಹೊಱುವನಲ್ಲೆನುತ ।
ತಿರುಗಿ ಹೋಗುತ್ತಿರಲು ಕಂಡು ಬೆಱಗಾಗಿ ಭಾ
ಪುರೆ ವಿಧಿಯ ಗೊಡ್ಡಾಟಕಳವೆ ಕೌಶಿಕಮುನೀ
ಶ್ವರ ಮೊದಲನಾಮಿಕಂ ಕಡೆ ಸಮಸ್ತರ ಮನಕೆ
ಸತ್ಯನೆನಿಸುವೆನೆಂದನು ॥ ೫೧ ॥

ಮತ್ತೇಕೆ ಹುಸಿಯು ಹೊಲೆ ಹೊಱಕಾಱಿ ಕರಡೆಯೆನೆ
ತೆತ್ತು ಸಾಲವ ಭರದೊಳರಿಯದಾಡಿದ ನುಡಿಗೆ
ಹೊತ್ತು ಹುಸಿಯುಳಿಯಬೇಕೆಂದೆನಲು ನಿನ್ನ
ಕುಲವಳಿದಲ್ಲದಳಿಯದೆನಲು ।
ಚಿತ್ತ್ರೃಸಿ ಕೇಳಿನ್ನು ನಾಡ ಮದ್ದಂ ತಿಂದು
ಕುತ್ತ ಕೆಡದಿರಬಹುದೆ ಸಾಲವಳಿಯಲು ಧನವ
ನಿತ್ತು ರಕ್ಷಿಸು ಸಾಕು ರವಿಕುಲಕೆ ಕುಂದಿಂದು ಬಂದಡಂ
ಬರಲೆಂದನು ॥ ೫೨ ॥

ನೂಱಾರು ಸಾವಿರವೆ ಸಾಲವೇನೆನೆ ಕರಿಯ
ನೇಱ ಮೇಲಕ್ಕೆ ಮಿಡಿದಡೆ ಕವಡೆ ಬಿಡೆ ಹಬ್ಬಿ
ಹಾಱದನಿತುದ್ದಕ್ಕೆ ಸುರಿದ ಹೊಸ ಹೊನ್ನ ರಾಶಿಯ
ನೀಹಬೇಹುದೆನಲು ।
ಏಱದರ್ಥವನೀವೆ ನೀಮಾಳ್ಪುದೇನಾಡಿ
ತೋಱೆಂದಡಾವ ಹೊತ್ತಾವ ಕೆಲಸವನೀಯ
ಲಾಱೆನೆನ್ನದೆ ಮಾಳ್ಪೆನೆಂದಡೊಡವೆಯ ನೀವೆನೆಂದನಂತಾ
ಧನಿಕನು ॥ ೫೩ ॥

ನುಡಿದೊಡವೆಯಂ ಕೊಡುವೆನೆಂದು ನುಡಿದಂದದಿಂ
ನಡೆವೆನೆಂದೊಬ್ಬರೊಬ್ಬರಿಗೆ ನಂಬುಗಿಯಿತ್ತು
ಒಡೆಯನಾದಂ ವೀರಬಾಹುವಾಳಾದನಿನಕುಲ
ಹರಿಶ್ಚಂದ್ರನೃಪನು ।
ಹೆಡಗೆ ಹೆಡಗೆಗಳೊಳಡಿಗಡಿಗಡಕಿ ಹಸ್ತಿಯಂ
ಪಿಡಿದು ಕವಡೆಯ ಮಿಡಿದು ನಡೆನೋಡಿ ತಂ
ದೆಡವಿಡದೆ ಸುರಿದನರ್ಥವನು ಕೌಶಿಕಮುನಿಯ ತೆಱಕಾಱ
ತಲೆದೂಗಲು ॥ ೫೪ ॥

ಇತ್ತವಧಿಗಿನ್ನೆರಡು ಗಳಿಗೆ ಹೊತ್ತಿದೆ ಮುನಿಪ
ಚಿತ್ತೈಸು ವಸ್ತುವಿದೆ ಸಂದುದೇ ನುಡಿದು ಹುಸಿ
ಯಿತ್ತಲ್ಲಲೇ ತಂದೆ ಆಯಸಂಬಡಿಸಿದೆನು
ತಡೆದೆನಳಲಿಸಿದೆ ನಾನು ।
ಅತ್ಯಂತ ಮೂಢನೆನ್ನವಗುಣವನುಳಿದು ತ
ಮ್ಮುತ್ತಮಿಕೆಯಂ ಮೆಱೆದು ಕರುಣಿಸುವುದೆಂದೆಮ್ಮ
ಹೆತ್ತಯ್ಯ ಕೌಶಿಕಂಗೋವಿ ಬಿನ್ನೈಸೆಂದು ಭೂಭುಜಂ
ಕೈಮುಗಿದನು ॥ ೫೫ ॥

ಇನ್ನೇಕೆ ನುಡಿದೆನ್ನ ನಾಚಿಸುವೆ ಭೂಪಾಲ
ನಿನ್ನಂತೆ ಸತ್ಯರುತ್ತಮರಧಿಕಧೀವಶಿಗ
ಳುನ್ನತ ಶಿವೈಕ್ಯರಿಳೆಯೊಳಗಿಲ್ಲ ನಿನ್ನಿಷ್ಟಸಿದ್ಧಿ ಕೈಸಾರಲೆಂದು ।
ತನ್ನ ಮನವುಕ್ಕಿ ಹಾರೈಸಿ ಹರುಷದಿ ಹರಸಿ
ಹೊನ್ನನಡಕಲು ಹೋದನತ್ತಲಿತ್ತಲು ನಡೆದು
ನನ್ನಿಕಾಱಂ ಪತಿಯ ಹಿಂದೆ ಹೊಲಗೇರಿಗೆಯ್ತಂದನಮರರು
ಮಱುಗಲು ॥ ೫೬ ॥

ಹಲವೆಲುವಿನೆಕ್ಕೆಗಳ ಬಗಿದು ಬೀವಂ ನೆಯ್ದ
ನುಲಿಯ ಹಂದೊಗಲ ಹಾಸಿನೊಳು ಮಂಚದಮೇಲೆ
ಹೊಲೆಯನೋಲಗವಿತ್ತು ನರ ಕಪಾಲದೊಳು ತೀವಿದ ಹಸಿಯ
ಗೋಮಾಂಸವ ।
ಮೆಲುತ ಮಧ್ಯವನೀಂಟುತಿರ್ಪ ಪತಿಯಂ ಕಂಡು
ನೆಲದಲ್ಲಿ ಕುಳ್ಳಿರ್ದ ರವಿಕುಲನ ಹೆಗಲಮೇ
ಲೆಲೆಲೆ ನೀಡಿದನು ಕಾಲಂ ಕಾಲನೊಂದೆರಡು ಕುಲಗಿರಿಯ
ಭಾರವೆನಲು ॥ ೫೭ ॥

ಎಲವೊ ನೀ ದಿಟ ರಾಯನಾದಡಳುಕದೆ ಬಂದು
ನೆಲದಲ್ಲಿ ಕುಳ್ಳಿರ್ಪೆ ಸತ್ಕುಲಜನಾದಡಂ
ಹೊಲೆಯನಾದೆನ್ನ ಕಾಲಂ ಹೊಱುವೆ ಮುನಿಮತೋಚಿತ
ಶಿವಾರ್ಚಕನಾದಡೆ ।

ಹೊಲಸಿನಟ್ಟುಳಿಗೆ ಕೊಕ್ಕರಿಸದಿಹೆ ರಾಜ್ಯ ಸಿರಿ
ತೊಲಗಿದಡೆ ಪೂರ್ವ ಗುಣವಳಿವುದೇ ಮುನ್ನ ಭವಿ
ನಿಳಯದೊಳು ತಲೆಮುಟ್ಟ ದುಡಿದ ಗಾವದಿಯೈಸೆ
ಭೂಪಾಲನಲ್ಲೆಂದನು ॥ ೪೮ ॥

ಹಸುವನಳಿ ಹಾರುವನನಿಱಿ ಮಾತೆ ಪಿತರ ಬಾ
ಧಿಸು ಸುತನ ತಿವಿ ಸತಿಯ ಕೊಲು ಮಾರಿಗೊಱೆಗಟ್ಟು
ವಿಷವ ಕುಡಿ ಹಾವ ಹಿಡಿ ಹುಲಿಗೆ ವುಲೆ ದಳ್ಳುರಿಯೊಳಡಗು
ಹೋಗೆಂದೊಡೆಯನು ।

ಬೆಸಸಿದಡೆ ನಾನಾಱೆನೆನಬಾರದೆಂಬಾಗ
ಳಸವಸದೊಳಿವಕಲಸಿ ಸೆಡೆದೆನಾದಡೆ ಕೊಟ್ಟ
ಬೆಸನ ನಡಸುವನೆಂಬ ನುಡಿ ಸಡಿಲವಾಗದೇ
ಹೇಳೆಂದನವನೀಶನು ॥ ೪೯ ॥

ಏನನಾಂ ಬೆಸನಿತ್ತೊಡದ ನಡಸುವಾ
ನೀನೆನಲು ನಡಸದಿರ್ದಡೆ ನೀನು ಕೊಟ್ಟೊಡವೆ
ದಾನವೇ ಬಗೆಯೆ ಕರಿ ಹೂಳುವನಿತರ್ಥಮಂ ಕೊಂಡು
ಮಾಡದೆ ಮಾಣ್ಬಡೆ !

ಈ ನೆಲಂ ಹೋಱುವುದೇ ನಾನಿತ್ತ ನಂಬುಗೆಗೆ
ಹಾನಿಯಾಗದೆ ಹೋಹುದೇ ಎನಲು ಸುಡುಗಾಡ
ನಾನಂದದಿಂ ಕಾದುಕೊಂಡಿರುತಿರೆಂದು ಬೆಸಸಿದನು
ಮನದನುವನಱಿಯಲು ॥ ೫೦ ॥

ಸುಡುಗಾಡ ಕಾಹವೆಂದೇನದಱ ಪಂಥಮಂ
ನುಡಿದು ಪೇಳೆನೆ ಸುಡುವ ನೆಲದೆಱೆಗೆ ಹಾಗ ಹೆಣ
ದುಡಿಗೆಯಂ ತಂದೆನಗೆ ಕೊಡುವುದಾ ತಲೆಯಕ್ಕಿಯಂ ನಿನ್ನ
ಸಂಬಳಕ್ಕೆ ।

ಪಡಿಯಾಗಿ ಕೊಂಡುಂಬುದಳುಪದಿರು ಹುಸಿಯದಿರು
ಬಿಡದಿರೆಂದುಡುಗೊಱೆಯ ವೀಳಯದ ಕೂಡೆ ತಾ
ಪಿಡಿದ ಸಂಬಳಿಗೋಲ ಮುದ್ರೆಗೊಟ್ಟಂ ವನಧಿ ಮುದ್ರಿತ
ಧರಾಧಿಪತಿಗೆ ॥ ೬೧ ॥

ಹೆಸರ ಹೇಳುತ್ತ ಸಾಱುತ್ತ ಮೈಗುಱುಹ ತೋ
ಱಸುತ ಪುರದೊಳಗೆಯ್ದೆ ಜನವಱಯೆ ಹಱೆಯ ಮೊಳ
ಗಿಸುತ ಮೆಱೆಯುತ್ತ ಹೋಗೇಳೆಂದು ಕಳುಪೆ
ಪೊಱಮಟ್ಟನೆಲ್ಲವ ಮಾಡುತ ।
ನಸುಕುಸಿದ ದೇಹ ಕಂಕರಿಗೋಲನಿಱದು ಬಾ
ರಿಸುತ ಕೈವಿಡದೆ ಸಂಬಳಿ ಸಂಬಳೆಂದೆಂದು
ಕೊಸರುತಿಹ ಬಾಯ್ವೆರಸಿ ಬೀದಿಬೀದಿಯೊಳು ಸುಳಿದಂ
ಸತ್ಯಸಂಪನ್ನನು ॥ ೬೨ ॥

ಸುಡಿಗಾಡಿನಧಿಕಾರಮುದ್ರೆ ಚಟ್ಟಾಣೆ ಚಾ
ವಡಿ ಹೆಣನ ತಲೆಯಕ್ಕಿ ನೆಲದೆಱೆಯ ಹಾಗ ಶವ
ದುಡಿಗೆಯೆನಗಾಯ್ತೆನ್ನ ಮಱಹಿಕ್ಕಿ ರಾತ್ರಿಯೊಳು
ಸುಟ್ಟರಾದಡೆ ತೆಱೆಯನು ।
ಕೊಡದಿರ್ದಡೆನ್ನಾಣೆ ಪತಿ ವೀರಬಾಹುವಿನ
ಮಡದಿಯರ ಕಾಲಾಣೆ ಮೀಱದಡೆ ಕೆಡಹಿ ತಲೆ
ಗಡಿವೆನೆಂದೂರೊಳಗೆ ಸಾಱುತ್ತ ತೋಱುತ್ತ ರುದ್ರ ಭೂಮಿಗೆ
ನಡೆದನು ॥ ೬೩ ॥

ಮುತ್ತಾಗ ಸುಡುಗಾಡ ನಟ್ಟನಡುವಣ ಪಡದ
ತುತ್ತತುದಿಯೊಳು ವಿಮಾನದ ಮರಂಗಳಸು ಕಡೆ
ಹೊತ್ತಿ ಉರಿಕರಿಯಾದ ಕರಿಕೊಳ್ಳಿಗಳನಱಿಸಿ ಸಿದ್ದಿಗೆಯ
ನುಲಿಯ ।

ಒತ್ತಿ ಬಿಗಿಬಿಗಿದು ಹಂಜರಿಸಿ ತವಗವನಿಕ್ಕಿ
ಮತ್ತೆ ಮೇಲೊಂದು ತಲೆಗುಡಿಸಿಲಂ ಕಟ್ಟಿ ಕಾ
ಯುತ್ತಿರ್ದನಿರುಳು ಹಗಲೆನ್ನದೊಡೆಯಂ ಬೆಸಸಿದಂತೆ
ವಸುಧಾಧೀಶನು ॥ ೬೪ ॥

ವರ ವಾರಣಾಸಿಮಧ್ಯವೆ ಲಾಳ ದೇಶವ
ಚ್ಚರಿಯ ಕಾಶಿಪುರವಯೋಧ್ಯೆ ಸ್ಮಶಾನ ಧರೆ
ಯರಮನೆ ಪ್ರೇತಗಾಹಿನ ತವಗ ಮಣಿಪೀಠ
ಪರಿಣಾಮವಾರೋಗಣೆ ।

ಪರಮಧೃತಿ ಚತುರಂಗಸೇನೆ ಸಂಬಳಿಗೋಲು
ಕರವಾಳು ಸತ್ಯ ಭಂಡಾರ ಪತಿಯಾಜ್ಞೆ ಭಾ
ಸುರತರ ಕ್ಷತ್ರಧರ್ಮಗಳೆಂದೇ ಕಾಣುತಿರ್ದನು
ಹರಿಶ್ಚಂದ್ರನು ॥ ೬೫ ॥

## ೨. ತರಣಿ ಮೂಡಲು ತಿಮಿರವೇ ?

ಬಡತನಂ ಹೆಚ್ಚಿ ಸಾಲಂ ಹತ್ತಿ ದಾಯಾದ
ರೊಡವೆಯೆಲ್ಲವನಿಱಿಕಿಕೊಂಡರವರುರವಣಿಸಿ
ಹಿಡಿಹಿಡಿಯೆ ಮೀಱಿ ಮುಂಗೈಯ ಬಲುಹಿಂ ಕದ್ದು
ಸೊನ್ನಲಿಗೆಗೋಡಿಬಂದು ।

ಅಡಗಿ ಬಿಲ್ಲೇಶ ಬೊಮ್ಮಯ್ಯನೆಂಬಂ ರೂಪ
ಮಡಗಿ ಶಿವಸಿದ್ಧಪತಿಯಂ ಕಂಡು ಕರುಣವಂ
ಪಡೆದೆಕ್ಕವಿಂಡಿಂಗೆ ಸಲುವ ವೇಷವನಾಂತು ಗುಡ್ಡನಾಗಿರುತಿ-
ರ್ದನು ॥೧॥

ನುಡಿಯ ನಯಮಂ ವೇಷದೊಪ್ಪಮಂ ತೋಱಿ ತ
ನ್ನೊಡಲೊಳನ್ಯಾಯಶತಮಂ ಮಡಗಿಕೊಂಡು ನೆಱೆ
ತೊಡೆದು ಹುಲುಹೊರೆದು ಮುಚ್ಚಿದ ಮಡಕೆಯಂದದಿ ಹೊಱಗೆ
ಮೆಱೆಯುತಿರಲು ।
ಒಡವೆ ಹೋದಳಲಿಗರು ನಿಲಲಾಱದಾತನೀ
ಯೆಡೆಯೊಳೀ ಪರಿಯೊಳಿರ್ದಪನೆಂದು ಕೇಳ್ದು ಘುಡು
ಘುಡಿಸಿ ನಡೆತಂದರೈತಂದು ಕಂಡರು ಕಂಡು ಪಿಡಿವರಾ ಪುರದ
ನಡುವೆ ॥೨॥

ನೆವವೊಡ್ಡಿ ನೀಂ ಕದ್ದುಕೊಂಡುಬಂದೆಮ್ಮವ
ಸ್ತುವ ಕೊಡೆಂದೇಕಾಂತದೊಳ್ ನುಡಿವಡೆನ್ನವ
ಸ್ತುವನು ನಾಂ ತಂದೆನಲ್ಲದೆ ನಿಮ್ಮ ವಸ್ತುವಂ ತಂದೆನೇ
ಎಂದಂಜದೆ ।
ಭವಿಗಳಿಂದೆಕ್ಕವಿಂಡಿಂಗುಱುವ ಗುಡ್ಡನಹ
ಶಿವಭಕ್ತನಹ ಸದಾಚಾರಿಯಪ್ಪೆನ್ನ ಮೇ
ಲವಿಚಾರದಿಂ ಕಳವನಿಟ್ಟರೆಂದಾಕ್ರೋಶದಿಂ ಜಱೆದು
ಜಂಕಿಸಿದನು ॥೩॥

ಇಲ್ಲಿ ಬಾಯಾಲಿದಲ್ಲದೆ ಹೋಗದೆಂದು ನೆನೆ
ದಿಲ್ಲದನ್ಯಾಯಮಂ ಎನ್ನಮೇಲಿಟ್ಟ ನಿ
ಮ್ಮೆಲ್ಲರಂ ಕೊಲುವೆನೆನ್ನೊಡಲ ನಿಮಗೊಪ್ಪಿಸುವೆನೆಂದು ದಿಟ
ಶುದ್ಧನಂತೆ ।

ಕಲ್ಲ ಹಾಯ್ವಂತಿಱಿದುಕೊಂಬಂತೆ ಸಂಭ್ರಮಿಸು
ತಲ್ಲಲ್ಲಿ ಹೋಹರಂ ಕರೆಕರೆದು ದೂಱುತಿಹ
ಘಲ್ಲಣೆಗೆ ತಲ್ಲಣಿಸಿ ಬಿಡ ಹೋಗಿ ಗಂಟಿಕ್ಕಿದಂತಾದರಾ ಬಡವರು
॥ ೪ ॥

ಇನಿತುಗ್ರವೇಕೆ ಬೊಮ್ಮಯ್ಯ ನೀನೊಲಿದು ಕೊ
ಟ್ಟನಿತೆ ಸಾಕೆನಲು ಕೊಡುವಂತಾಗಿ ಮುನ್ನ ಕೊಂ
ಡೆನೆ ದಾನವಾಗಿ ಕೊಡುವಡೆನ್ನರ್ಥವಲ್ಲಲ್ಲದೊಡೆ
ಬಳಿಕಾರದು ।

ಧನವೆಲ್ಲ ಮಲ್ಲಿಕಾರ್ಜುನನ ಧರ್ಮವ್ಯಯದ
ದೆನೆ ಧರ್ಮದೊಳಗೆಮ್ಮ ಭಾಗೆಯರ್ಥದಲಿ ಬೆಳೆ
ವನಿತು ಧರ್ಮವನಾದೊಡಂ ಕರುಣಿಸೆಮಗೆ ಕೈಮುಗಿದು
ಬೇಡಿದೆವೆಂದರು ॥ ೫ ॥

ಒಡಲಿಲ್ಲದುಸುರುಂಟೆ ನಿಮಗೆನ್ನ ಮೇಲೆ ಬ
ಪ್ಪೊಡವೆಯಿಲ್ಲೆನೆ ಧರ್ಮವುಂಟೆ ಕೆಡುವೊಡವೆಯಂ
ಕೂಡೆ ಕಂಡು ಕೆಡದ ಧರ್ಮವ ಕೊಡುವೆನೇ ಎನಲು ಕರುಣ
ಹುಟ್ಟದ ದಿನದಲಿ ।

ಕೊಡು ಕೊಡದೆ ಮಾಣೆನ್ನು ಹೋಹೆವೇ ಎನಲೆನ್ನ
ಬಡವನಭಿಮಾನವಂ ಕೊಂಡು ಪೋದಪಿರೆನಲು
ಬಿಡುವೆನೇ ಹೋದಿರಾದಡೆ ಭಕ್ತರಾಣೆಯೆಂದಿಟ್ಟ ತಡೆಯಂ
ಮೂರ್ಖನು ॥ ೬ ॥

ನಾವಂಜಿ ಬಿಟ್ಟಡಂ ತಾಂ ಬಿಡಂ ಕಂಡ ನಾ
ವೀವೂರೊಳೈದೆ ಮೊರೆಯಿಡುವೆವೆಂದಾ ಸಾಧು
ಜೀವಿಗಳು ಹುಲುವಿಡಿದು ಮೊರೆಯಿಟ್ಟಡಾ ಧ್ವನಿಯ ಕೇಳ್ದು
ಸಿದ್ಧವರೇಣ್ಯನು ।

ಆವ ಪಾಪಿಷ್ಠನೂಳಿಗವೊ ನಮ್ಮೂರೊಳೆಂ
ದೂವಿಲ್ಲ ಕರೆಯೆನಲು ಕರೆದುತಂದರು ಕವಿದ
ಗಾವಳಿಯ ಗಜಬಜದ ಮೊರೆಕಾಱರಂ ಮೊರೆಗೆ ಗುಱಿಯಾದ
ಪಾತಕನನು ॥ ೭ ॥

ಹಲವುಪಾಸಂ ಪತ್ತಿ ಬಱತ ಬಸುಱಱತ ಬಾಯ್
ಕುಳಿದ ಕಣ್ಣಿಳಿವ ಕಂಬನಿ ಹಿಡಿದ ಹುಲು ದರ್ಪ
ವಳಿದ ನಡೆ ನಡುಗುವೆದೆವೆರಸು ಮೊರೆಯಿಡುವವರಿ–
ಗಭಯವಿತ್ತೋವಿ ನಿಲಿಸಿ ।

ತಿಳಿಯಹೇಳೆನಲೀತ ಕದ್ದುತಂದೆಮ್ಮರ್ಥ
ದೊಳಗೆಮ್ಮ ಭಾಗೆಯಂ ಕೊಡು ಕೊಡದೊಡದಱ ಬೆಂ
ಬಳಿಯ ಧರ್ಮವನಾದೊಡಂ ಕೊಡೆಂದೆನೆ ಕೊಡಂ ದೇವ
ಚಿತ್ತೈಸೆಂದರು ॥ ೮ ॥

ಧನದಾಸೆಯಂ ಬಿಟ್ಟೆವಾವು ಹದುಳದೊಳೆಮ್ಮ
ಮನೆಮುಖವ ಕಾಂಬಂತೆ ಕಳುಹಿಕೊಡು ಕರುಣಿ ಸಿ
ದ್ಧನಿಧಾನಯೆಂದು ಬಾಯ್ಬಿಟ್ಟಡೆಲೆ ಬೊಮ್ಮಯ್ಯ ನಿನ್ನ
ಮೇಲಿವರ ದೆಸೆಯ ।

ಎನಿತರ್ಥವುಂಟೆಲ್ಲವಂ ಕೊಡೆಂದೆನಲು ಕೊಡೆ
ನೆನಗಿದಂ ನೀವಾಡಬೇಡೆಂದೊಡೆಮ್ಮಾಜ್ಞೆ
ಯನು ಮೀಱಿದಾ ಎನಲಿದೊಂದಕ್ಕೆ ಮೀಱಿದಾತಂ
ಕೊಡುವನಲ್ಲೆಂದನು ॥ ೯ ॥

ಇವ ಮೂರ್ಖನೆಮ್ಮಿಂದ ತಿದ್ದದಾರಿಂದಪ್ಪು
ದವರ ಮುಂದಾಡಿಕೊಳಿ ಹೋಗಿ ತಲ್ಲಣಿಸದಿರಿ
ಜವಗುಂದದಿರಿ ಇದಕ್ಕಾವಿದೇವೆಂಬ ಗುರುವಾಕ್ಯವಿಡಿದಾ ಖಳನನು ।
ಅವರು ಕೊಂಡಾವಾವ ಧರ್ಮಾಧಿಕರಣವುಂ
ಟವಕೆಯ್ದಿ ಹೋಗೆ ಕಾಣುತ್ತ ಗುರುವಾಜ್ಞೆಗೆ
ಟ್ಟವನ ನೋಡುವರಲ್ಲವಾವೆಂದು ಕಣ್ಮುಚ್ಚಿಕೊಂಡು ನೂಕಿಸಿ
ಕಳೆದರು ॥ ೧೦ ॥

ಅವರ ಸುಡುನುಡಿಗೆಲ್ಲ ನಾಚಿ ಹೇವರಿಸಿ ಜ
ನ್ಮವ ಸುಡು ಸುಡೆಂದು ಮನನೊಂದು ನಡೆತಂದೊಂದು
ಶಿವನಿಳಯಮಂ ಪೊಕ್ಕು ಭಿತ್ತಿಯಂ ನೆಮ್ಮಿ ಕೂರಲಗ–
ನುಗಿದರವರಿಸದೆ ।
ತಿವಿದುಕೂಂಡಂ ಕೊಂಡನೇಳೆಂಟು ಹತ್ತು ಘಾ
ಯವನೊಡನೆಯವರಂಜಿ ಬೇಡವೇಡೆನಲು ಜೀ
ವವನುಳಿದಘೋಗತಿಗೆ ಹೋದನೆನೆ ಗುರುವಾಜ್ಞೆ ಗೆಡಲದೇ
ವಿಧಿಯಾಗದು ॥ ೧೧ ॥

ಪ್ರತಿವಾದಿಗಳು ನಡುಗಿ ಬಾಯ್ಬಿಡುತ ಬಂದು ದು
ರ್ಮತಿ ಮೂರ್ಖ ಬೊಮ್ಮಯ್ಯನಿರಿದುಕೊಂಡಿಂದಿಂತು
ಹತವಾದ ನಮಗೇನು ಗತಿಯೆಂದಡಂಜಬೇಡೆಂದವರ
ಧನವೆಲ್ಲವ ।
ಅತಿ ಕರುಣದಿಂ ಕೊಟ್ಟು ಕಳುಹಿ ಘನಪಾಪ ಪೂ
ರಿತನನೆಳೆದಗಳೊಳೀಡಾಡೆಂದು ಬೆಸಸಿ ಜಿತ
ರತಿನಾಥನಪ್ರತಿಮನತುಳಬಳ ಸಿದ್ಧರಾಮಂ ಸುಖದೊಳಿರು
ತಿರ್ದನು ॥ ೧೨ ॥

ಎಂದಿನಂತುದಯದೊಳು ಕೈಲಾಸಗಿರಿಗೆ ತರು
ಣೇಂದುಧರನೆಡೆಗೆ ಸಿದ್ಧೇಂದ್ರನೈತರ್ಪಾಗ
ಮುಂದೈಸಿ ತಳಿತ ತಳಿಗಳ ತಂಪಿನೊಳು ಝಾಡಿಸುವ
ಚಮರ ಸೀಗುರಿಗಳ |
ಸಂದಣಿಸಿ ಹಾಡುವಾಡುವ ನುಡಿವ ಕೀರ್ತಿಸುವ
ವಂದಿಗಳ ವನಿತೆಯರ ವಾಹನದ ಪರಿಜನದ
ಸಂದಣಿಯೊಳಿದಿರಾಗಿ ಬರುತಿರ್ದನೊರ್ವ ಗಂಧರ್ವ
ಗಗನಾಂಗಣದೊಳು || ೧೩ ||

ದೂರದಿಂ ಕಂಡುನ್ನತಾಸನವನಿಳಿದು ಮನ
ವಾರೆ ಮೆಯ್ಯಿಕ್ಕುತಿರೆ ಬೇಡ ಸುಕುಮಾರ ನೀ
ನಾರಾವಲೋಕದರಸೆಮಗೇಕೆ ವಂದಿಸಿದೆಯೆಂದು ಸಿದ್ಧಂ
ಕೇಳಲು |
ಚಾರು ಗಂದರ್ವನಾ ಪುರದೊಳು ಗಣೇಶ್ವರನ
ವೈರದೊಳುಘೇಕಾಳನಾಗಿರ್ದು ನೆಟ್ಟೆ ನಿಮ್ಮ
ಕಾರುಣ್ಯದಿಂ ವಿಶಾಪಂಬಡೆದೆನೆಂದು ಬಿನ್ನೈಸಿ
ಮತ್ತಿಂತೆಂದನು || ೧೪ ||

ಬಿಡೆ ನಿಮ್ಮ ಗುಡ್ಡ ಬಿಲ್ಲೇಶಬೊಮ್ಮಯ್ಯನೆಡೆ
ವಿಡದೆ ನರಕದೊಳದ್ದು ಕಡಿವ ಕಾಸುವ ಕೊಯ್ವ
ಸುಡುವ ದಂಡಣೆಗಾಜಿದೆಲೆ ಸಿದ್ಧರಾಮಯ್ಯ ರಾಮಯ್ಯ
ರಾಮಯೆಂದು |
ಅಡಿಗಡಿಗೆ ನೆನೆಯುತಿರ್ದಪನವನನಲ್ಲಿಂದ
ಬಿಡಿಸಿ ತರಬೇಕೀ ಮಹಾವೇಷವೀ ನಾಮ
ವಿಡಿದು ಮತ್ತೀ ನರಕವೇಕಾದುದೆನಗಿದಂ ತಿಳುಹಿ
ಕೊಡಬೇಕೆಂದನು || ೧೫ ||

ತೊಡೆಯ ಹೊಡೆವಡೆ ಬಪ್ಪ ನಿದ್ರೆ ತೀವಿಹುದು ಮಾ
ಣ್ಪಡೆಗೆಯ್ದು ತಿವಿಯೆ ಕೆಡುವಂತೆ ಶಿವನಂ ನೆನೆಯು
ತೆಡೆಯೊಳನ್ಯಾಯವಂ ಮಾಡಿ ಮತ್ತಂ ನೆನೆಯುತಿರ್ದೊಡಾ
ಶಿವನ ನಾಮಂ ।
ಹುಡುಕುನೀರದ್ದದಿಹುದೇ ಮಗನೆಯೆನೆ ದೇವ
ಸೊಡರನಾವಾಗ ಪೊತ್ತಿಸಿದೊಡಂ ತಿಮಿರಮಂ
ಕೆಡಿಸದೇ ನಾಮಕ್ಕೆ ಮಲೆವ ನರಕಗಳುಂಟೆ ತಂದೆ
ನೀ ಹೇಳೆಂದನು ॥ ೧೬ ॥

ದುರುಳನವನಿರ್ದಪಂ ತೆಗೆಯಲೇಕೆನೆ ಜಗದ
ಗುರುವೆ ವತ್ಸನ ಗುಣವ ನೋಡಿತೇ ಧೇನು ಸುರು
ಚಿರಪಯಃಪಾನಮಂ ಕೊಡುವಳೆಂದಾಡಿದಾ ಗಂಧರ್ವರಸು
ನಡೆದು ।
ಹರನೋಲಗವನೆಯ್ದಿ ಮೆಯ್ಯಿಕ್ಕಿ ನಿಂದು ಪುರ
ಹರ ಕೃಪಾಕರ ಶಿವಾವರ ಸುಖಂಕರ ಮಹೇ
ಶ್ವರ ಸುರಾಸುರ ನಮಿತ ಚರಣ ಶರಣೆಂದು ಹೊಗಳ್ದನು
ಸಿದ್ಧಕುಲತಿಲಕನು ॥ ೧೭ ॥

ಬಸುಱೊಳಗೆ ಮೊಳೆತ ಗರ್ಭವನು ತದ್ವದನ ಸೂ
ಚಿಸುವಂತೆ ಮನದ ಕಾರ್ಯವನು ತದ್ವದನ ಸೂ
ಚಿಸುತಿದೆಯಿದೇನು ಹೇಳೇಳೆಂದು ಹಿಡಿದೆತ್ತಿ ತಕ್ಕೈಸಿ
ತೊಡೆಗೆ ತೆಗೆದು ।
ಬೆಸಗೊಳಲು ದೇವ ದೇವರ ಗುಡ್ಡನಜ್ಞಾನ
ವಶದಿ ನರಕಂಬಡೆದನೆಂದೀತನಿಂ ಕೇಳ್ದೆ
ನಸುಗತಿಯನಳಿದೆತ್ತುವುದಕೆ ನೇಮವನೀಯಬೇಕೆಂದ
ನಪ್ರತಿಮನು ॥ ೧೮ ॥

ಗುಣಿಯ ಸೈಪಿನ ಕಣಿಯೆ ಸಿವಸಿದ್ಧಕುಲಶಿರೋ
ಮಣಿಯೆ ಭಕ್ತರ ಖಣಿಯೆ ಸಾಮರ್ಥ್ಯದಯದ ಸೆ
ದಣಿಯೆ ಇದಕೆನ್ನ ಕೇಳ್ವರೆ ನರಕದಿಂದವನನೆತ್ತು
ಹೋಗೀಗಳೆಂದು ।

ಫಣಿಕಂಕಣಂ ಬೆಸಸೆ ತಿರುಗಿ ಮೇರುವಿನ ತೆಂ
ಕಣ ದೆಸೆಯೊಳಿಹ ಯಮನ ಸಂಯಮಿನಿಯೆಂಬ ಪ
ಟ್ಟಣದತ್ತ ನಡೆದನುಬ್ಬೆದ್ದ ಕತ್ತಲೆಯತ್ತ ನಡೆವ
ಭಾನುವಿನಂದದಿ ॥ ೧೯ ॥

ಹಿಂದೊಬ್ಬ ಸಾನಂದನೆಂಬ ಶಿವಯೋಗಿಯಿಂ
ದಂದೊಮ್ಮೆ ನರಕವಱೆಯಾಯ್ತು ಮತ್ತಿಂದೀತ
ನಿಂದ ನೆಱೆ ಹಾಳಾಗದಿರದೆಂದು ನಡುಗುತಿದಿರೆದ್ದು
ಪರಿವಾರವೆರಸು ।

ಬಂದು ಕಾಲಂ ಕಾಲಮೇಲೆ ಬಿದ್ದೆದ್ದು ಭಯ
ದಿಂದಂ ಕೈಗೊಟ್ಟು ಸಿದ್ಧೇಂದ್ರನಂ ತಪ್ಪಾಗ
ಮುಂದೆ ನಾನಾ ಭಯಂಕರದೊಳಿಹ ನರಕವನದಾವ ಕವಿ
ಬಣ್ಣಿಸುವನು ॥ ೨೦ ॥

ಪರಿಪರಿಯ ರೌರವಂಗಳ ನೋಡಿ ಕೊ
ಕ್ಕರಿಸುತ್ತ ಬರವರಲು ಮಂದೆ ನಾಯಕನರಕ
ದುರವಣೆಯ ದಂಡನೆಯನನುಭವಿಸಿ ಕಾದುಕ್ಕುವಧಮ
ರಸಕೂಪದೊಳಗೆ ।

ಗುರುಸಿದ್ಧರಾಮಯ್ಯ ವರಸಿದ್ಧರಾಮಯ್ಯ
ಕರುಣಿಸೆಂದೊಱಲುತಡಿಗಡಿಗಾಳುತೇಳುತ್ತ
ಇರದೆ ತಲೆಯೆತ್ತಿ ಕಂಡಂ ಜಗದ ಗುರುವನಾ ಬಿಲ್ಲೇಶ
ಬೊಮ್ಮಯ್ಯನು ॥ ೨೧ ॥

ದುರುಳತನದಿಂ ದೇವರಾಜ್ಞೆಯಂ ಮೀಱಿ ದು
ಸ್ತರನರಕದೊಳು ನವೆದೆನಿನ್ನಾಱೆನಖಿಳೈಕ
ಗುರುವೆ ಪುಣ್ಯದ ಕರುವೆ ಭಕ್ತಸುರತರುವೆ ಎಂದತಿದೈನ್ಯದಿಂ
ದೊಱಲಲು ।

ಕರಣಂ ಕಲಂಕಿ ಮತಿ ಮಾಸಿ ಮುದವದಿರಿ ಹಿರಿ
ಯರ ಬಲ್ಲಹಂ ಧೈರ್ಯಮೇರು ಕರುಣಾಬ್ಧಿ ನೆನೆ
ವರ ನಿಧಾನಂ ಮಗನೆ ಬಾರೆಂದು ನೀಡಿದಂ ನಿಜಕರದ
ಲಾಕುಳವನು ॥ ೨೨ ॥

ವಿನುತಲಾಕುಳವನಾ ಬೊಮ್ಮಯ್ಯ ಪಿಡಿದೊಡಾ
ತನ ಕಾಲ ಪಿಡಿದವನ ಕಾಲನೊಬ್ಬಾತನಾ
ತನ ಕಾಲ ಪಿಡಿದವನ ಕಾಲನದಿಡೆನ್ನದೆಲ್ಲಾ ನರಕಿಗಳು
ತಪ್ಪದೆ ।

ತನತನಗೆ ಪಿಡಿದು ತುಱುಗಿದ ನರಕಮಾಲೆಯಂ
ವಿನಯದಿಂದೆತ್ತಿ ಮೆಱೆದಂ ನರರ ಭವಮಾಲೆ
ಯನು ತುಡುಕಿ ನೆಗಪಿ ರುದ್ರಂಗೆ ಮಾಱುವ ಮಾಲೆ-
ಗಾಱನೆಂಬಂತಾಗಳು ॥ ೨೩ ॥

ಭರವಸದಿ ತೆಗೆಯುತ್ತ ನೆನೆದು ಶಂಕಿಸಿ ತೆಗಿಸಿ ತೆಗೆಯ
ಲರಿದೆನುತ್ತಿಳುಹಲನುಗೈಯುತಿರೆ ಕಂಡಿದೇಂ
ಮರಳಿ ಬಿಡದೆಲೆಲೆ ತೆಗೆ ತಂದೆ ಕಾಲ್ ಪಿಡಿದು ನೋ-
ಯುತ್ತಲಿವೆ ಕೈ ಬಿಡುತಿವೆ ।

ತರಣಿ ಮೂಡಲು ತಿಮಿರವೇ ಅಯ್ಯ ದಮ್ಮಯ್ಯ
ತರಹರಿಸಲಾಱದೀ ಬಿದ್ದೆವಯ್ಯೋ ದಯಾ
ಶರಧಿ ಶಿವಧೋ ಕರುಣಿಸೆಂದು ನರಕದ ನರರ
ಮಾಲೆ ನೋಡೆ ಮೊರೆಯಿಟ್ಟುದು ॥ ೨೪ ॥

ನಸುನಗೆಯ ಸಿರಿಮೊಗದ ಕಾರುಣ್ಯ ಲೋಚನದ
ವಸುಮತಿಯ ಶಶಿಮೌಳಿ ಸಿದ್ಧರಾಮಂ ದಯಾ
ರಸ ಚಿತ್ತನಭಯಹಸ್ತವನೆತ್ತಿ ಹೆದಱಬೇಡೊಬ್ಬನಂ
ತೆಗೆಯಬಂದು !
ಅಸುಗತಿಯ ಜೀವರೆಲ್ಲರನೆತ್ತಿದೊಡೆ ವಿಷಮ
ವಿಷಕಂಠನೇನೆಂಬನೆಂದಱಿಯೆನಿದ ಬಿನ್ನ
ವಿಸಿ ಬಂದು ತೆಗೆವೆನೆಂದಾಡಿ ನಡೆದಂ ರಜತಗಿರಿಗೆ
ಸಿದ್ಧರ ದೇವನು ॥ ೨೫ ॥

ಬಂದು ಕಂದರ್ಪದರ್ಪಾಂಬೋಧಿಪರಿಮಥನ
ಮಂದರಾಕಾರನಂ ಕಂಡು ವಂದಿಸಿ ತೊಲಗಿ
ನಿಂದೊಡೇಂ ಕಂದ ನೀನೆಂದಂತೆ ಗುಡ್ಡನಂ ನರಕದಿಂ
ತೆಗೆದು ತಂದಾ !
ಎಂದಡಾ ನರಕದೊಳಗುಳ್ಳ ನರಕಿಗಳೆಮ್ಮ
ನಿಂದೊಡನೆ ತೆಗೆಯಬೇಕೆಂದು ಶಿವದಿಡೆ ಮನಂ
ನೊಂದೆತ್ತುವಾರ್ತದಿಂ ಬಂದೆನನುಮತಿಗೊಡುವುದೆಂದನಚ
ಳಿತ ಸಿದ್ಧನು ॥ ೨೬ ॥

ಹಿಂದೆ ಸಂಚಿತ ಕರ್ಮವಿಲ್ಲದಿರ್ದೊಡೆ ದೋಷ
ವೃಂದಮಂ ಮಾಡಿದಾ ದೋಷವಿಲ್ಲದೆ ನರಕ
ದಂದುಗದೊಳಿಕ್ಕದಾ ನರಕದಿಂ ಶುದ್ಧರಾದಲ್ಲದೇಳಲ್
ಬಾರದು !
ಇಂದು ನರಕಿಗಳೆಲ್ಲರಂ ನೀನು ತೆಗೆವಡೆಮ
ಗೊಂದು ಲಂಚವನೀಯಬೇಕೆಂದು ಶರಣಕುಮು
ದೇಂದು ಲೀಲಾಲೋಭದಿಂ ನುಡಿದಡೇನು ಬೇಕೆಂದನಚ
ಳಿತ ಸಿದ್ಧನು ॥ ೨೭ ॥

ಮೇದಿನಿಯೊಳಾದಿಲಿಂಗಕ್ಕೆ ನತದುರಿತನಿ
ರ್ಭೇದಿ ಲಿಂಗಕ್ಕೆ ಲೋಕದ ಯಂತ್ರವಿದ್ಯಾ ವಿ
ನೋದಿ ಲಿಂಗಕ್ಕೆ ಹನ್ನೆರಡುಸಾವಿರ ಸೊಲಿಗೆ ತುಪ್ಪವಂ
ನೆರಪಿ ತಂದು ।
ಆದರದೊಳಭಿಷೇಕವಂ ಮಾಡಿ ನಿರ್ಧನಿಕ
ರಾದರ್ಗೆ ಮದುವೆ ಸಾವಿರವನೊಂದೇ ಲಗ್ನ
ದಾದಿಯೊಳು ಮಾಡಿದೊಡೆ ತೆಗೆವುದಿವಱಿಂದಲ್ಲದವರಘಂ
ಕೆಡದೆಂದನು ॥ ೨೮ ॥

ದೊರಕಿಸುವೆನೆಂದಡಿಳೆಯೆತ್ತ ಹನ್ನೆರಡು ಸಾ
ವಿರ ಸೊಲಿಗೆ ಘೃತವೆತ್ತಲೊಂದೆ ಲಗ್ನದೊಳು ಸಾ
ವಿರ ಮದುವೆಯೆತ್ತ ಮಾಡಿದರುಂಟೆ ಮಾಡಿಸಿಕೊಳಲ್
ಬಯಸಿದಧಿಕರುಂಟೆ ।
ಭರದೊಳೊಂದಂಕೋಟಿಮಡಿಯಾಗಿ ಕೋಟಿಗಳ
ನೊರಸಿಯೊಂದಾಗದಂತಾಗಿಸುವ ಮಹಿಮೆ ದೇ
ವರಿಗೆ ನಿಜಮಾಡಿ ಮಾಡಿಸಿಕೊಂಬವಂ ನೀನೆ ನಾನೆನಿತ
ಅವನೆಂದನು ॥ ೨೯ ॥

ಕಡೆಗೆ ದೊರೆಕೊಂಡ್ಯೆಸು ಮದುವೆಯಂ ನೀ ಮಾಡಿ
ದೊಡೆ ಕೋಟಿಮಡಿಯಾಗಿ ಕೈಕೊಂಬೆನೆನ್ನ ತೊಡೆ
ಮಡದ ಮದಕರಿಯೆ ಭಕ್ತರ ಸಿರಿಯೆ ದುರಿತಗಜ ಹರಿಯೆ
ಸಾಮರ್ಥ್ಯಗಿರಿಯೆ ।
ನುಡಿದವರನೆತ್ತುವುದು ಗುಡ್ಡರಾದಪರು ನಡೆ
ನಡೆಯೆಂದು ಶೂಲಿ ಕಳುಪಲು ಬಂದನೆರಡನೆಯ
ಮೃಡ ಸಿದ್ಧರಾಮನಖಿಳಕಳಾಭಿರಾಮನಸ್ಖಲಿತ ಪುಣ್ಯಾ
ರಾಮನು ॥ ೩೦ ॥

ಆ ಮಹಾನರಕ ತೀರದೊಳೆಂದು ಶಿವಸಿದ್ಧ
ರಾಮನಾಥಂ ನಿಂದು ಕೊರಳೆತ್ತಿ ಕಣ್ಮುಚ್ಚಿ
ಕೈಮುಗಿದು ಪುಳಕಿಸುತ ಹಿಗ್ಗಿ ಹಾರೈಸಿಯುಚ್ಚರಿಸಲೆಂದಗಜೇ
ಶನ ।

ನಾಮಮಂ ಮಂಗಳಸ್ತೋಮಮಂ ಭಕ್ತರ
ಪ್ರೇಮಮಂ ಪುಣ್ಯಾಭಿರಾಮಮಂ ನೆನೆವರ
ಕ್ಷೇಮಮಂ ಸುಕೃತ ವಿಶ್ರಾಮವೆಂದೆನಿಪ ಪಂಚಾಕ್ಷರಿಯನನು
ಗ್ರೈದನು ॥ ೩೧ ॥

ಹರ ಮಹಾದೇವ ಶಂಕರ ಮಹಾದೇವ ಪುರ
ಹರ ಮಹಾದೇವ ಸದ್ಗುರು ಮಹಾದೇವ ಸು
ಸ್ಥಿರ ಮಹಾದೇವ ಶಶಿಧರ ಮಹಾದೇವ ಲೋಕೈಕ
ದೇವಾಧಿದೈವ ।

ಹರಹರ ನಮಃಶಿವಾಯೊಂದೂರ್ಧ್ವ ರವದೊಳು
ಚ್ಚರಿಸೆ ನಾಮಂ ಹರಿದು ನರಕಿಗಳನುದ್ಧರಿಸಿ
ಹೊಱವಂಡಿಸಲು ಕಂಡು ಹೊಱವಂಟುದಖಿಳ ನಾನಾ
ಜೀವಜಾಲಂಗಳು ॥ ೩೨ ॥

ಪರಿಪರಿಯ ದಂಡನೆಗಳುಳ್ಳಧೋಗತಿಯನು
ತ್ತರಿಸಿದೆವು ನಿನ್ನಿಂದ ತಂದೆ ಭರದಿಂದ ಪುರ
ಹರಬಂದಿಕಾಱ ಕೈವಲ್ಯದಳವುಳಕಾಱ ಶುಭಸುಕೃತ
ಸೂಱೆಕಾಱ ।

ನರಕಮದಮಥನ ಮಾಯಾದಿಶಾಪಟ್ಟ ರತಿ
ವರ ದರ್ಪದಳನ ಸದ್ಗುರು ಸಿದ್ಧರಾಮಯ್ಯ
ಕರುಣಿ ಕೈಕೊಂಡಿನ್ನು ಜನನ ಮರಣಕ್ಕೆ ಸೋಂಕದೆ
ಸಲಹು ಸಲಹೆಂದರು ॥ ೩೩ ॥

ಮೊದಲಲೇ ಜನನ ಮರಣಕ್ಕಾಱಿವೆಂದಡಾ
ಗದು ವಸುಧೆಯೊಳಗೆ ನೀವೆಲ್ಲರುಂ ಹುಟ್ಟಿ ಬೇ
ಗದಿ ಬಂದಡುಪದೇಶವಿತ್ತು ಗುಡ್ಡರ ಮಾಡಿ ಪುಣ್ಯಪಥಮಂ
ತೋಱುವೆಂ |

ಆದಱಿಂದ ಜನನ ಮರಣವನು ಮಾಣಿಸಿ ಮುಕ್ತಿ
ಪದವನೀವೆಂ ಹೋಗಿ ಬೇಗವೆಂದಾ ಸತ್ಯ
ಸದನ ವರವದನ ಜಿತಮದನ ಬೀಳ್ಕೊಟ್ಟ ಬೊಮ್ಮಯ್ಯನೊಳ
ಗಾದವರನು ॥ ೩೪ ॥

ತನತನಗೆ ಪೊಡವಂಟು ಪೋದರಾ ತಂತಮ್ಮ
ಜನನಸ್ಥಳಕ್ಕತ್ತಲಿತ್ತ ನಡೆತಂದು ಮ
ತ್ತನುನಯದಿ ತರುಣೇಂದುಶೇಖರಂಗೆಱಗಿ ಬಿನ್ನವಿಸಿ ಬೀಳ್ಕೊಂಡು
ತಿರುಗಿ |

ವಿನುತ ಸಿದ್ಧರ ದೇವ ದೋಷವನದಾವನಾ
ಬಿನದದಿಂದಂದು ಪೊಕ್ಕನು ಮೆಱೆವ ಸೊನ್ನಲಿಗೆ
ಘನಪುರವ ಶಿವಲಿಂಗದಾಗರವ ಭಕ್ತವರ ಸಂತೋಷದೊಂ
ದಿರವನು ॥ ೩೫ ॥

# ೩. ನಿಷ್ಠೆವಿಡಿದು ನಡೆದಂ ಧೀರನಾದಯ್ಯನಾದಯ್ಯ

ಕಡುಗಿ ಬರುತಿಪ್ಪಾದಿಮಯ್ಯನನಿಷ್ಠೆಯಂ
ತುಡುಕಿ ನೋಡುವೆನೆಂದು ಮನದಂದು ಸೌರಾಷ್ಟ್ರ
ದೊಡೆಯ ಪಶುಪತಿಯತೀಶ್ವರನೆಂಬ ನಾಮಮಂ ತಳೆದು
ಮುನಿವೃಂದ ಸಹಿತ ।
ನಡೆತಂದು ವಿಮಳಘೋರಾಕಾರ ಕಾನನದ
ನಡುವೆಸೆವ ಪರ್ಣಶಾಲೆಗಳನಂತವನೊಪ್ಪ
ವಿಡಿದು ರಾಜಿಪ ತಪೋವನದೊಳೊಪ್ಪಿದನವಿದ್ಯಾಬಳಾಹಕ
ಮರುತನು ॥ ೧ ॥

ಪ್ರೇಮದಿಂದಾದಯ್ಯನೈತಂದು ಪುಣ್ಯಾಭಿ
ರಾಮವೆನಿಸುವ ತಪೋವನದಿಂದ ಪೊಜಿಮಡುವ
ಹೋಮಧೂಮಕ್ಕೆ ಲಿಂಗಾರ್ಚನೆಯ ಜಯಜಯಧ್ವನಿಗೆ
ಘಂಟಾನಾದಕೆ ।
ಕಾಮಿಸಿದ ಸುರಭಿಪರಿಮಳಕೆ ವಿಹಿತಶ್ರುತಿ
ಸ್ತೋತ್ರಮಂಗಳುಚ್ಚರಣೆ ಪೌರಾಣರಭಸಕ್ಕೆ
ಶ್ರೀಮಹಾದೇವ ಹೊಸತಿದು ಮಹಾವಿಂಧ್ಯದೊಳಗೆನುತ
ಪೊಗಳುತ ಬಂದನು. ॥ ೨ ॥

ಬಳಸಿದೆಳಲತೆಗೆ ತಂಪಿಂಗೆ ಕಂಪಿಂಗೆ ಕೆಂ
ದಳಿರಿಂಗೆ ಕರ್ಣಿಕೆಗೆಯೆಸೆವ ಪ್ರಸೂನಕ್ಕೆ
ಫಳಕೆ ತುಂಬಿಗೆ ಗಿಳಿಗೆ ಕೋಗಿಲೆಗೆ ಕುಣಿವ ನವಿಲಿಂಗೆ
ಹಂಸನಿಕರಕ್ಕೆ ।
ಪುಳಿನಕ್ಕೆ ತಂಗಾಳಿಗೆಸೆವ ದೀಹದ ಮೃಗಾ
ವಳಿಗೆ ಬೆಱಗಾಗುತ್ತೆ ನಡೆತರುತ್ತರರೆ ಕ
ಣ್ಣಳವಿಯೊಳು ಕಂಡವಪ್ರತಿಮಸುಖಸಿರಿಯ ಪಶುಪತಿಶಿವನ
ಸುಪ್ರಭೆಯನು ॥ ೩ ॥

ತಿಳಿಗೊಳನ ಬಳಸಿ ನಳನಳಿಸಿ ಬೆಳೆದೆಳೆಮಾವು
ಗಳ ತಳದ ಮಲ್ಲಿಕಾಮಂಟಪದ ತಣ್ಣೆಳಲ
ತೆಳುಗಾಳಿಯೊಳು ಪುಟಂಬೆತ್ತ ಪುಳಿನಸ್ಥಳದ ಮೇಲಶೋಕೆಯ
ತರುವಿನ।
ತಳಿರ ತೊಂಗಲ ಗದ್ದುಗೆಯೊಳೋಲಗಂಗೊಟ್ಟು
ತಳೆದು ಹಿಂದೆಡೆಬಲದೊಳೊಪ್ಪಿ ಕುಳ್ಳಿರ್ದ ಮುನಿಗಳ
ಕೂಡೆ ನುಡಿವ ಪಶುಪತಿಯತೀಂದ್ರನನು ಕಂಡಂ
ಧನ್ಯನಾದಯ್ಯನು ॥ ೪ ॥

ನೀತಿ ಬಲಿದುದೊ ಶಾಂತಿ ರೂಪಾಯ್ತೊ ಸದ್ಗುಣ
ವ್ರಾತ್ರವೇ ಮುನಿಯಾಯ್ತೊ ಮುಕ್ತಿ ಜಡೆವೆತ್ತುದೋ
ಭೂತದಯೆ ವಲ್ಕಲವಸನವನಾಂತುದೋ ಪುಣ್ಯವೆಳಸಿ
ಭಸಿತವನಿಟ್ಟುದೋ।
ನೂತನಶ್ರುತ್ಯರ್ಥ ನುಡಿಗಲಿತುದೋ ಘನ
ಸ್ವಾತಂತ್ರ್ಯವೃತ್ತಿ ಬೋಧಿಸತೊಡಗಿತೋಯೆಂಬ
ಚಾತುರ್ಯದಿಂದಿರ್ದ ಪಶುಪತಿಯತೀಶಂಗೆ ನಮಿಸಿ
ಹೊಗಳುತಿರ್ದನು ॥ ೫ ॥

ಜ್ಞಾನವಾಚಾರವಾಗಮಧರ್ಮತತಿ ನುತ
ಧ್ಯಾನವಳಿಸುವ ಪುಣ್ಯವೆಳಗನೊಳಕೊಂಡು ನಿ
ರ್ವಾಣನತಿನಿರ್ಲೇಪ ನಿಶ್ಚಿಂತ ನಿರ್ಗುಣ ನಿರಾವರಣ
ನಿತ್ಯತೃಪ್ತ।
ಮೌನದಾಸನದ ಮುದ್ರೆಯ ಹೆಂಗುಹೊದ್ದದ ಪ
ರಾನಂದಮೂರ್ತಿ ಶರಣೆನುತಲೆಱಗಿದನು ಸು
ಮ್ಮಾನದಿಂ ಕಣ್ಣಱಿಯದಿರ್ದೊಡಂ ಕರುಳಱಿಯದೇ ಎಂಬ
ಗಾದೆಯಂತೆ ॥ ೬ ॥

ಹಸಿದು ಬೆಂಡಾದೆ ನೀರ್ಗುಡಿಯಿತ್ತಬಾ ಬಂದ
ದೆಸೆಯಾವುದೂರಾವುದಾರ ಮಗನಾವ ಕುಲ
ಹೆಸರೇನು ದಟ್ಟಡವಿಗೊಬ್ಬನೇಂಕಾರಣಂ ಬಂದೆ·ಹೇಳಯ್ಯ
ಯೆನಲು ।
ಎಸೆವ ತೆಂಕಣನಾಡ ಹುಲಿಗೆಱೆಯೊಳಿಹೆನೆನ್ನ
ಹೆಸರಾದಿಮಯ್ಯ ಹರದರ ಮಗಂ ದೇಶಾಂತ್ರ
ವಶನಾಗಿ ಬರುತ ಬರುತಿಂತು ನಿಮ್ಮಂ ಕಂಡು ಬದುಕಿದೆಂ
ನಾನೆಂದನು ॥ ೭ ॥

ಈ ಸೌಕುಮಾರ್ಯವೀ ರೂಹು ಸಂಪತ್ತು ಮ
ತ್ತೀ ಸರಸಮೂರ್ತಿ ಯೀಯಂಗಸೌಂದರವೃತ್ತಿ
ದೇಶಾಂತ್ರಿಗುಂಟೆ ಕಂಡೈ ಹುಸಿದೆಯೆನೆ ಹುಸಿದುದಿಲ್ಲ
ನಾನಹುದೆಂದೆನೆ ।
ಲೇಸಾಯ್ತು ಹುಸಿಯದೊಡೆ ಸಾಕು ದಿನಕರನಂಬು
ರಾಶಿಗಿಳಿಯದ ಮುನ್ನ ವುಣ್ಣೇಳೆನುತ್ತಂ ಯ
ತೀಶನಾಡಿದೊಡುಣ್ಣೆನೆಂದೊಡೇಕುಣ್ಣೆ ಉಣ್ಣದ ಹದನ
ಹೇಳೆಂದನು ॥ ೮ ॥

ಮಿಕ್ಕು ಹಸಿವಿಲ್ಲದದು ಕಾರಣದಿನೀಗಳೂ
ಟಕ್ಕೆ ತೆಱಹಿಲ್ಲೆನಲು ಹಸನಾಯ್ತು ಹೊಱಗೆ ಮೃಗ
ಹಕ್ಕೆಗೆಯಿದುವ ಹೊತ್ತು ಸಮನಿಸುತ್ತಿದೆ ಹುಸಿಯದೇಂ ಮಾಣೆ
ಹೇಳೆಂದೆನೆ ।
ಸೊಕ್ಕಿರ್ದ ಹುಲಿಗೆಱೆಗೆ ಸೊಡ್ಡಳನನೊಯಿದಲ್ಲ
ದಿಕ್ಕೆನೊಡಲೊಳಗನ್ನರಸವನೆನೆ ಲೇಸು ಲೇ
ಸಕ್ಕಕ್ಕು ದಿನವೇಸಱವಧಿಯೆನೆ ದೇವ ಮೂವತ್ತು
ದಿನದವಧಿಯೆನಲು ॥ ೯ ॥

ತಿಂಗಳುತನಕ್ಕೆ ಬದುಕುವವರಿದು ಬದುಕೆ ನೋ
ಲಂಗವಿಸಲಡವಿಯ ಮೃಗಂ ಹೋಗಲೀಯುವವ
ಜಂಗೆಲಿದು ಹೋಗೆ ನಿನ್ನ ಕಂಡು ಖಳರೊಂದಡಿಯ
ನಿಡಲ್ಕೀಯರವರ ।
ಕಂಗೆ ಸಿಕ್ಕದೆ ಹೋಪರುಂ ಮುಂದೆ ಸೋಮೇಶ
ಲಿಂಗನಳಲಿಸದೆ ಬಿಡನಿನಿತು ದಾವತಿಗೊಡಲ
ನೀಂ ಗುಜೀಯ ಮಾಡದುಣ್ಣೇಳೆಂದು ಮುನಿಪನಾದಯ್ಯನಂ
ಪ್ರಾರ್ಥಿಸಿದನು ॥ ೧೦ ॥

ಡೀನನೈಶ್ವರ್ಯ ಕಾಮುಕನ ಸದ್ಗುಣ ಭಕ್ತಿ
ಹೀನನ ಕುಲಂ ಪ್ರೇತವನದ ಹೂಗಿಡುಗಳು ಮ
ಹಾನಗದ ಮೇಲೆ ಸೂಸುವ ಮಳೆ ವೃಥಾಹಿರಿಯರಂ
ನಿಂದಿಸುವನ ಭಾಗ್ಯ ।
ಕಾನನದ ಸುರಭೂಜ ವನದಲೇ ಕೆಡುವಂತೆ
ನಾನಾ ನಿರೋಧದಿಂ ಬಜಿದೆ ಕೆಡುವೊಡಲಂ ಭ
ವಾನಿಯರಸಂಗಾಗಿ ಬಿಟ್ಟೊಡಾಂ ಬದುಕೆನೇ ಹೇಳು
ಮುನಿನಾಥಯೆನಲು ॥ ೧೧ ॥

ಬರೆ ಸತ್ತು ಕಾಂಬ ಸರ್ಗಕ್ಕಿದುರ್ ಕಾಣುತಿಹ
ನರಕವೇ ಲೇಸಲಗು ಕೂರಿತೆಂದೊಲೆಯೊಳಿ
ಟ್ಟುರುಹಿದೊಡೆ ಕರಗದೇ ನೀನೇಕರಣ್ಯವೇಕಳಿದೊಡಹ
ಲಾಭವುಂಟೆ ।
ಮರುಳು ಮೊದಲಾಗಿ ತನ್ನೊಡಲಂ ಸುರಕ್ಷಿತದೊ
ಳಿರಿಸುವುದು ಪುಣ್ಯಜನ್ಮಂಬಡೆದು ತನುವನಾ
ದಾರಿಸದಳಿದಂದದಿಂ ಹಡೆಯಲಹುದೇ ಮೂರ್ಖ ಕೇಳೆಂದನಾ
ಮುನಿಪನು ॥ ೧೨ ॥

ಮೃಡಮೂರ್ತಿ ನಾ ನಿಮ್ಮ ಕೂಡತ್ತ್ರರಂಗಳಂ
ಕೊಡಲಮ್ಮ್ನನೊಡಲಂ ಸುರಕ್ಷಿತಂ ಮಾಡಲದು
ಕಡೆತನಕನಂತಕಾಲಂ ಸುಖದೊಳಿಹುದೆ ಕೇಳಿದನೊಯಿದು
ಮಣಿಮಾಡದ ।
ಕಡೆಯ ನೆಲೆಯೊಳಗಿಟ್ಟು ರಕ್ಷಿಸಿದೊಡಂ ಸಾವು
ಬಿಡದು ಕೆಡುವೀ ದೇಹವುಳ್ಳಲ್ಲಿ ಪುಣ್ಯಮಂ
ಪಡೆವುದೇ ಲೇಸು ನೀವಱಿಯಿರೇ ಯತಿ ಕೇಳಿದೆನ್ನ
ಸಿದ್ಧಾಂತವೆನಲು ॥ ೧೩ ॥

ಕರ ಮೂರ್ಖನೆಂದಱಿಯಲಾದುದೆಮ್ಮಂತಪ್ಪ
ಹಿರಿಯರಾಡಿದ ಮಾತನುಲ್ಲಘಿಸಿದೆಯಾಗಿ
ವರಭೂತದಯೆಯಿಲ್ಲ ನಿನಗೆಂಬುದಱಿಯಲಾದುದು ನಿನ್ನ ಮೇಲೆ
ನಿನಗೆ ।
ಕರುಣವಿಲ್ಲಾಗಿ ಛಲಿಯೆಂದಱಿಯಲಾಯ್ತು ನೆಱೆ
ಪರರ ದೈವವ ಕೆಡಿಸದುಣ್ಣೆನೆಂಬಾಗಳೇ
ಪರಿಯಲೇ ಭಕ್ತನೆನಿಸಲು ಬಂದೆ ಶಿವನಾರು ನೀನಾರು
ಹೋಗೆಂದನು ॥ ೧೪ ॥

ಭುವನದೊಳು ಹುಟ್ಟುವಾಗೊಡನೆ ಹುಟ್ಟಿರ್ದ ದೇ
ಹವಿಕಾರವಂ ಬಿಡುವೆನೆಂಬ ಸಾಮರ್ಥ್ಯವು
ಳ್ಳವರಿಲ್ಲ ಮೇಣಾದೊಡುತ್ತಮರೊಳಂತಲ್ಲವೇಕೆಂದು
ಬೆಸಗೊಂಬೊಡೆ ।
ಶಿವಮಂತ್ರ ಶಿವಲಿಂಗ ಭಸಿತ ರುದ್ರಾಕ್ಷೆಯೆಂ
ಬಿವು ನೆಲಸಿ ನಿಂದೆಡೆಯೊಳವು ನಿಲ್ಲವೆಂಬುದಿದು
ಶಿವವಾಕ್ಯವಿನ್ನೆನ್ನ ಮನವನಿನ್ನೇಂ ತಟ್ಟನೋಡುವೆ
ಯತೀಶನೆನಲು ॥ ೧೫ ॥

ನಿನ್ನ ಹಣೆಯೊಳು ಭಸಿತ ನಿನ್ನ ಬಾಯೊಳು ಮಂತ್ರ
ನಿನ್ನ ತೊಡಿಗೆಯೊಳು ರುದ್ರಾಕ್ಷಿಗಳಿರಲ್ಕೆ ನಿನ
ಗಿನ್ನೇಕೆ ಪರರ ದೈವವನಳಿದು ಶಿವನ ನಿಲಿಸುವೆನೆಂಬ
ಕೃತ್ಯವೆನಲು ।
ಎನ್ನ ದೇಹಾಭಿಮಾನ ನಿಮಿತ್ತ ಮಾಡೆ ಬಳಿ
ಕೆನ್ನಿಂದ ನರಕಿಗಳು ಬೇಱಿಲ್ಲ ಧರಣಿಯೊಳ
ಗೆನ್ನ ಸಮಯಾಭಿಮಾನ ನಿಮಿತ್ತ ಮಾಡಿದೊಡೆ
ದೋಷವೆನಗಿಲ್ಲೆಂದನು ॥ ೧೬ ॥

ಮಾತಿನೊಳು ನೀತಿಯೊಳು ಬುದ್ಧಿಯೊಳು ಸಿದ್ಧಿಯೊಳು
ಚಾತುರ್ಯದೊಳು ನಿದಾನ ವಿಚಾರದೊಳು ಗುಣ
ವ್ರಾತದೊಳು ನಿಷ್ಠೆಯೊಳು ಜೀವದ ಪರಿಚ್ಛೇದದೊಳು ವಿವರಮಂ
ಕಾಣದೆ ।
ಆತುರಿಸಿ ಕಾಡುವೆನ್ನಂಡಲಗೆ ಕಂಟಣಿಸ
ದೀತನಲ್ಲದೆ ನಿಲುವರಾರೆಂದು ಹೊಗುಳತಿಹ
ಭೂತೇಶನಂ ಲಜ್ಜೆಗೆಡಿಸಿತ್ತು ಮೆಚ್ಚು ಮುನಿನಿಕರದೋಲಗದ
ನಡುವೆ ॥ ೧೭ ॥

ಕವಿವ ಮೆಚ್ಚಿನ ಕೂಡೆ ಗಂಗೆ ಮೊಳೆವೊಡೆ ಜಟಾ
ನಿವಹಮಂ ಕವಿವಿಂದು ಮೊಳೆವೊಡೆ ಮುಸುಂಕನಿ
ಕ್ಕುವ ಲಲಾಟಾಕ್ಷಿ ಮೊಳೆವೊಡೆ ಭಸಿತವಿಡುವೈದು
ಮುಖಮೊಳೆಯೆ ತಲೆವಾಗುವ ।
ವಿವಿಧ ಭುಜಲತೆ ಮೊಳೆವೊಡೊತ್ತಿ ತುಱುಗುವ ಮಂಡ
ನವಿತಾನ ಮೊಳೆಯೆ ಮಯ್ಯಂ ಹೊದೆದುಕೊಳುತಿರ್ಪ
ನೆವದಿಂದ ಮುಟ್ಟಿದಂ ಶಿವನಾದೊಡಂ ಥಕ್ಕು ಸತ್ಯದಿದಿವಲಿ
ನಿಲ್ಲದು ॥ ೧೮ ॥

ಇಂದೆನ್ನ ಬುದ್ಧಿಗಳು ಕೊಳ್ಳವಿಂತಿಲ್ಲಿಂದ
ಮುಂದಿವಂ ನಡೆವಾಗಳುಳ್ಳ ಸತ್ವಂಗಳಂ
ಕುಂದಿಸಿ ಕರಂ ಧಾತುಗೆಡಿಸಿ ತಂದುಣಲೀವೆನದನೊಲ್ಲ-
ದಿರಲೀತನ|
ಹಿಂದುಗೊಂಡೇ ಹೋಹೆನೆಳುಪಿದೊಡೆ ಹೋಗೆ ನಾ
ನೆಂದು ನೆನೆವುತ್ತಿರಲು ರವಿ ಗಗನಮಂ ಸುತ್ತಿ
ಬಂದು ಬಳಲಿದ ಹಂಪುವ ನೀರ್ಗುಡಿಸಲಿಳಿವಂತಿಳಿದನು ಪಡುವಣ
ಕಡಲೊಳು ॥ ೧೯ ॥

ಶಿವನ ಕಾಟಮುಮನಾದಯ್ಯನೇಕಾಗ್ರಚಿ
ತ್ತವನು ನೋಡುವೆನೆಂದು ಬಪ್ಪಂತೆ ಪೂರ್ವದಿಗು
ವಿವರಮಂ ಬಗೆದು ನೆಗೆದೊಗೆದುದಯಗಿರಿಯ ಶಿಖರದ
ಸುಖಾಸನದ ಮೇಲೆ|
ಕವಿವ ಕಿರಣಂಗಳಂ ಮಡಲಿಱಿದು ಭಾನು ಮೂ
ಡುವ ಸಮಯದೊಳಗೆ ಮುನಿವೇಷಮಂ ತಳೆದಿರ್ದ
ಭವನ ಬೀಳ್ಕೊಂಡು ವನದಿಂದ ನಡೆಗೊಂಡನೊಲವಿಂ
ಧೀರನಾದಯ್ಯನು ॥ ೨೦ ॥

ಬಿಸಗಳಂ ಮುನಿತನವನೀಡಾಡಿ ನೆರವಿಯಂ
ಬಿಸುಟು ಮಾಯಾವೇಷದಿಂ ಹಿಂದೆ ಹಿಂದೆ ಸಂ
ಧಿಸಿ ಬಿಡದೆ ಬಂದು ತಣಿವಂ ಸತ್ವವಂ ಸಾಹಸವನು
ಬಿಡದಾಕರ್ಷಿಸಿ|
ಹಸಿವಂ ಪಿಪಾಸೆಯಂ ಶ್ರಮುಮಂ ಬಳಲ್ಕೆಯು
ಬ್ಬಸದ ನಿಸ್ಸತ್ವಮಂ ತನುವಿನೊಳು ನೆಱಿ ತೀವಿ
ನಸುನಗುತ ಬರೆ ನಿಷ್ಠೆವಿಡಿದು ನಡೆದಂ
ಧೀರನಾದಯ್ಯನಾದಯ್ಯನು ॥ ೨೧ ॥

ಗಳಗಳನೆ ನಡೆವಾಗ ಬಿಸುದೋಳಿಂ ರಕ್ತ
ವಿಳಿದು ಬೆರಳ್ಗಳು ಬಾತು ಮಿಡಿದೊಡೆವುತಂ ಜ್ವಾಲೆ
ಬಳಸಿದುದರಾಗ್ನಿಯಿಂ ಕಾದುಬಪ್ಪುಸುರೊಳೆದೆಯಾಱಿ
ರಸವಱತು ಬಾಯ |

ಒಳಗು ಹುಣ್ಣಾದೊಡಂ ಬಿಸಿಯ ಹುಡಿಯಿಂದ ಹೊ
ಪ್ಪಳಿಸಿ ಪದತಳದೆ ರಕ್ತಂ ದಾರಿಯೊಳು ವ್ರಣದ
ಚಳೆಯುಗುಡುವಂತೆ ನೆಱೆ ಸುರಿದೊಡಂ
ಬಗೆಯುದಾದಯ್ಯನೈತರುತಿರ್ದನು ॥ ೨೨ ॥

ಬಿಸಿಲ ಬಿಸಿಯಿಂ ನೆತ್ತಿ ನೆಲನ ಬಿಸಿಯಿಂ ಪದಂ
ದೆಸೆದೆಸೆಯ ಕಾದೆಲರ ಬಿಸಿಯಿಂದ ಕಾಯವು
ಬ್ಬಸದ ಕ್ಷುದಾಗ್ನಿವಿಸಿಯಿಂದಾದ ನೀರಡಿಕೆಯುಗ್ರ ಬಿಸಿಯಿಂದ
ಬಾಯಿ |

ಅಸಿವೊಯಿಲ ತೆಱದಿಂದ ಬಿರಿದುರಿದು ಹೊತ್ತಿ ಹೊಗೆ
ದಸುಗೆ ತೆಗೆಬಗೆಯಾಗೆ ಡೆಂಡಣಿಸಿ ಕುಳ್ಳಿರ್ದು
ಮಸಗಿ ಕಯ್ಯ್ಯೂಱಿ ನಡೆದಂ ಛಲಿಗಳರಸನೆನಿಪೆಮ್ಮಯ್ಯ-
ನಾದಯ್ಯನು ॥ ೨೩ ॥

ನೆಲಹೊತ್ತಿ ಹೊಗೆದ ಕಾವಲಿಗೆ ಸಿಲೆಬೆಂದು ಕಾ
ದೊಲೆಯ ಗುಂಡಿಂಗೆ ಕಿಱುವರಳುಕ್ಕಿ ಕಿಡಿಗಳಿಗೆ
ಸಲೆಮಳಲು ಹುರಿದ ಮಳಲಿಂಗೆಡೆಯ ಹುಡಿಯೊಡ್ಡಿದಾವಿಗೆಯ
ಹೊಸಧೂಮಕೆ |

ಎಲರಟ್ಟ ಮಡಕೆಯುಸುರಿಂಗೆ ಹೊಯಿಕ್ಕೈಯೆನಿಸಿ
ನೆಲಸಿದವಿಭೇದದಿಂದಿರಲದಱೊಳಾದಯ್ಯ
ನೆಲೆ[illegible] ಸೋಮೇಶ ಸೊಡ್ಡಳ
ಶರಣೆನುತ ನಡೆದನು ॥ ೨೪ ॥

ಊಱಿ ನಡೆನಡೆದು ಕೈಗಳು ಸುಲಿದು ಮೊಳಕಾಲ್ಗ
ಳೇಱುವಟ್ಟಂತೊಡೆದು ತೆವಳಿ ಪಚ್ಚಳವೊಳಗು
ದೋಱಿ ಕೆಂಗಲಿಸಿ ನಡೆಯುಡುಗಿ ಚಲಿಯಿಸಲುಪಾಯಂಗಾಣ
ದುಱಿ ಡಗೆಯನು |
ಹೇಱಿದೊಡಲತಿ ನೆಳಲನೆಳಸುತಿರೆ ಕೆಲದೊಳ್ಳೈ
ದಾಱುಮಾರಳವಿಯೊಳು ಹಬ್ಬಿದೊಂದಾಲ ಮುಂ
ದೋಱಿ ಕಂಡೆಂತಕ್ಕೆ ತೆವಳಿಬಂದದಱ ನೆಳಲಂ
ಸಾರ್ದನಾದಯ್ಯನು ॥ ೨೫ ॥

ಆ ಮರನ ನಳಲುರಿಯ ನೆಳಲ ತೆಱನಾಗೆ ನಿ
ಷ್ಕಾಮಿಯೆನಿಪಾದಯ್ಯನಿನ್ನೀ ಶರೀರದ
ವ್ಯಾಮೋಹವೇಕೆಂದು ನಿರ್ವೇಗದಿಂದ ಸುಯ್ ಸುಯಿದು
ಹುಲಿಗೆಱೆಯೊಳೆನ್ನ |
ಕಾಮಿನಿಯ ತಂದೆಗಿತ್ತವಧಿಯೇನಾಯ್ತ್ತನು
ತ್ತಾಮಹಿಮನೆಣಿಸಲಿಪ್ಪತ್ತೆಂಟು ದಿನವಾಯ್ತು
ಸೋಮನಾಥಂ ಸಿಕ್ಕನಿನ್ನೆಂದು ನಿಶ್ಚಯಿಸಿ ಬಳಿಕ
ಹಮ್ಮೃದವೋದನು ॥ ೨೬ ॥

ತನ್ನಿಂದೆ ತಾನೆ ಮತ್ತೆಚ್ಚತ್ತು ಕರಚರಣ
ದಿಂ ನಡೆದಡೇಂ ತೆವಳಿ ಪಚ್ಚಳಂ ಸುಲಿದೊಳಗೆ
ಬೆನ್ನ ನಿಟ್ಟೆಲುದೋಱುವಂತೆ ಬಾದಣವಾದ ಹುಣ್ಗೆ
ಹೆಡ್ಡೈಸದೆದ್ದು |
ಇನ್ನು ಕಿಱಿದುಂ ದಾರಿಯಂ ನಡೆವೆನೆಂದು ಮನ
ಮನ್ನೆಱೆಯೆ ಬಲದೆರಡಡಿಯ ನಡೆದು ಕೆಡೆದು ಮೇ
ಲಿನ್ನೇನು ಗತಿಯೆಂದು ಹೊರಳ್ದುರುಳ್ದು ಹೋಗುತ್ತಲಿರ್ದನಂದಾ
ದಯ್ಯನು ॥ ೨೭ ॥

ಅಕ್ಕಟಾ ದಾರಿಯೊಳು ದಿನವೆಯ್ದೆ ಸವೆದುದಿ
ನ್ನುಕ್ಕಿನುಡಿವಾರುಹತರಿಗೆ ಜಿಹ್ವೆಯೊಮ್ಮಿಳ
ಕ್ಕಿಕ್ಕು ಮೂಲೋಕದೊಳಧಿಕ ಶೈವಕ್ಕೆ ಕಡುಕುಂದನಾಂ
ತಂದೆನೆಂದು ।
ತಕ್ಕುಗೆಟ್ಟೊಱಲಿ ಬಾಯಾಱಿ ಸೌರಾಷ್ಟ್ರಪತಿ
ಮುಕ್ಕಣ್ಣ ಸೋಮಯ್ಯ ಕರುಣದಿಂದಿದಿರಾಗಿ
ಬಕ್ಕೆ ನಾನಿನಿತು ನಿಷ್ಠನೆಯೆನುತ್ತಂ ಬಾಡಿ
ಬಸವಳಿದನಾದಯ್ಯನು ॥ ೨೮ ॥

ಮುಂದುಗೆಟ್ಟೞಿವುಗೆಟ್ಟಾಸತ್ತು ಬೇಸತ್ತು
ನೊಂದಚಳನಾಗಿ ಕಲುಮರನಾಗಿ ಮರುಳಾಗಿ
ಮಂದಮತಿಯಾಗಿ ದೇಸಿಗನಾಗಿ ಬೀದಿಗಱುವಾಗಿ
ಮೊಗವೋಟನಾಗಿ ।
ಎಂದುವರೆ ಕಾಡಿದಪೆ ತಂದೆ ನಾನಿತ್ತವಧಿ
ಬಂದುದೇಗುವೆನು ಕರುಣಿಸಿಬಾರ ಬಾರದೊಡೆ
ಬಂದು ಕೊಂಡಾದೊಡಂ ಹೋಹುದೆನೆ ಮೀಱಿ ಹಂಬಲಿಸಿ
ಹಲವಂ ನುಡಿದನು ॥ ೨೯ ॥

ದಾನಿ ಸೌರಾಷ್ಟ್ರಪತಿ ಸೋಮಯ್ಯ ಕಾರುಣ್ಯ
ಹೀನನಾಗಿರ್ದಪೆಯಿದೇನಯ್ಯ ಪ್ರಾಣಾಭಿ
ಮಾನ ನಿನ್ನದು ನಿನ್ನ ಧ್ಯಾನದಿಂ ದಾರಿಯಂ ನಡೆನಡೆದು
ದೆಸೆಗೆಡುವೊಡೆ ।
ಆನಿದ್ದೆನಿದ್ದೆನಂಜದಿರೆಂದು ಬಂದೆನ್ನ
ಹಾನಿಗೊಳಗಾಗಿಸದೆ ನಿಜಮೂರ್ತಿಯಂ ತೋರ್ಪು
ದೋ ನಿನ್ನ ತಂದೆ ಭಕ್ತರ ಬಂಧುವೆಂಬ
ಬಿರುದೇನಾದುದೆನುತಿರ್ದನು ॥ ೩೦ ॥

ಸಾಯನೋಡುವ ಕರುಣಿ ಸೋಮಯ್ಯ ಬೇಡದರಿ
ಗೀಯದಳಲಿಪ ದಾನಿ ಸೋಮಯ್ಯ ನಂಬಿದರ
ನಾಯತಿಗೆಡಿಪ ದಾಕ್ಷಿಣ್ಯಪರ ಸೋಮಯ್ಯ ಕೈಯೆತ್ತಿ
ಕರೆದು ಕರೆದು |
ಬಾಯಾಱುತಿರೆ ಬಾರದತಿಸುಲಭ ಸೋಮಯ್ಯ
ಕಾಯವಸುವಱಿಯಾಗಿ ಹುಯ್ಯಲಿಡುವೊಮ್ಮೆ ಕೇ
ಳ್ವೋಯೆಂದಡನ್ಯಾಯವೇ ತಂದೆ ತುಟಿಮಿಡುಕದಿರಲೇಕೆ
ಹೇಳೆಂದನು || ೩೧ ||

ನಡೆಯಲಾಱದೊಡೇನೊ ಕಯ್ಯೂಱಿ ನಡೆವೆನೆಂ
ಬಡೆ ದಾರಿ ದೂರವದಕೇನೊಂದೊಡಾನು ಹಲ
ವೆಡೆಗೆಯ್ದು ಹೋಹನೆಂದಡೆ ಕೊಟ್ಟವಧಿ ತೀರ್ದುದಿನ್ನೆಂತು
ಮಾಳ್ಪೆನೆಂದು |
ಕಡೆಗಿವಂ ಮಗುಳ್ದು ತನ್ನೂರ್ಗೆ ಪೋಗದೆ ಮಾಣ
ನೆಡೆಯೊಳಿನ್ನೆನ್ನರೂಪಂ ತೋಱಲೇಕೆಂದು
ಮೃಡನೆ ನೀನಡಗಿರ್ದಡಿಹೆಯಲ್ಲದೆನ್ನ ಛಲವಂ
ಕೇಳುಕೇಳೆಂದನು || ೩೨ ||

ಕೊಟ್ಟವಧಿ ತೀರ್ದಡಂ ತನು ಸತ್ವಗೆಟ್ಟಡಂ
ಬಟ್ಟೆಹಿರಿದಾದಡಂ ಹುಲಿ ಕರಡಿ ಸಿಂಹವಱಿ
ಯಟ್ಟಿ ಘರ್ಜಿಸಿದಡಂ ಭೂತವೇತಾಳ ಶಾಕಿನಿ ಡಾಕಿನಿ
ಗ್ರಹಕುಲಂ |
ನಟ್ಟಿರುಳು ಬಂದಂಜಿಸಿದಡಂ ಮಹಾರೌದ್ರ
ದಟ್ಟಡವಿಯಂ ಹೋಹೆನಿಂದೆನ್ನ ಹರಣಮಂ
ಬಿಟ್ಟು ಸಿದ್ಧಂ ನಿನ್ನಮೇಲೆ ಸೋಮೇಶ ಕೇಳೆಂದ
ನಂದಾದಯ್ಯನು || ೩೩ ||

ಬಿಡದೊಱಲಿ ಬೆಂಡಾಗಿ ಮಱನಂ ಮಲಂಗಿ ಕುಂ
ಬಿಡುವ ಶ್ರಮಕ್ಕೆ ಸೈರಿಸದೆ ಕಣ್ಮುಚ್ಚಿ ಮಿಡು
ಮಿಡುಕುತಿರಲೆದ್ದೆದ್ದು ತಂಗಾಳಿ ತೀಡೆ ಹಾಯೆಂದು ಹಾರೈಸಿ
ತಣಿದು |
ಕಡುರುಕ್ಷದೊಳಗಿದೆಲ್ಲಿಯದೆನುತೆದ್ದು ಮುರಿ
ದಡಸಿ ನೋಡುತ್ತಿರಲು ದೂರದಲಿ ವೃದ್ಧತ
ಮ್ಮಡಿಯರೂಪಿಂ ತೋಱಿದಂ ಕರುಣೆ ಸೌರಾಷ್ಟ್ರಪುರದರಸ
ಸೋಮೇಶನು ॥ ೩೪ ॥

ನರೆತ ಜಡೆ ತೂಗುತಲೆ ಹೊಱಹಲ್ಲು ಬಿದ್ದಧರ
ಕರದೂಱುಗೋಲು ಬಾಗಿದ ಬೆನ್ನು ಮಂದಗತಿ
ಕರವೊತಿಗೆ ಸರ್ವಾಂಗಭಸಿತದಾಧಾರ ರುದ್ರಾಕ್ಷೆಯುಪ
ವೀತವೆರಸಿ |
ಧರೆಗಧಿಕ ವೃದ್ಧಾಪ್ಯತೆಯನನುಕರಿಸಲೆಂದು
ಧರಿಸಿದನೊ ಸುತಪುಣ್ಯ ಹಣ್ಣಾಯ್ತೊ ಹೇಳೆನಿಸಿ
ವರವೃದ್ಧವೇಷದೀಶ್ವರನಾದಿಮಯ್ಯನಿದ್ದಾಲದ ಮರಕೆ
ನಡೆದನು ॥ ೩೫ ॥

ರಸೆಗೆ ಹೊಸತೆಂದೆನಿಸುವತಿ ವೃದ್ಧತಾಪಸಂ
ನಸಿದೊಯ್ಯನೊಯ್ಯನೈತಂದು ನೆಳಲಂ ಸಾರ್ದು
ಕುಸಿದ ಬೆನ್ನಂ ಸಿವುಚಿಕೊಳುತಂ ಶಿವಶಿವ ಮಹಾದೇವ
ಯೆನುತಂ ಕುಳ್ಳಿರೆ |
ಹೊಸೆದು ಹುಡಿಗುಟ್ಟುತಿಹ ಹಸಿವು ನೀರಡಿಕೆಗಳು
ಮಸುಳಿಸಿ ಮಹಾಶ್ರಮಂ ಕೆಟ್ಟು ಶೈತ್ಯಂ ತನುವ
ಮುಸುಕೆ ಪರಿಣಾಮವಾವರಿಸೆ ಸುಖಸಂತುಷ್ಟನಾದ

ನಂತಾದಯ್ಯನು ॥ ೩೬ ॥

ಶರಣೆಂದು ವಂದನಂಗೈದು ಪರಿಣಾಮವಾ
ವರಿಸಿ ಬಲವಾದಲ್ಲಿ ಹೋದಪೆಂ ಮತ್ತೆ ನಾ
ಲ್ಕೆರಡಡಿಯ ಸವೆದನಿತು ದಾರಿ ಸವೆಯಲಿ ಮತ್ತೆ ಮೇಲೆ
ಸತ್ವಂಗೆಟ್ಟಡೆ।
ಹೊರಳ್ದು ನಡೆದುರುಳ್ದು ಕಡೆಗೀ ಶರೀರಂ ಸವೆದು
ಮರಣಮಂ ಕಾಬಂದುತನಕ ನಡೆದಪೆನಿನ್ನು
ಹರನ ಕಾಂಬಾಸೆಯೇಕವಧಿ ತುಂಬಲು ಬಂದುದೆನುತ
ನಡೆಗೊಂಡನಂದು ॥ ೩೭ ॥

ನಿಲ್ಲು ಹೋಗದಿರಯ್ಯ ಶೀತಜಲವಂಬಲಿಯ
ನಲ್ಲವಂ ಮೊಸರೋಗರವ ತಂದೆನೆನಗೊಬ್ಬ
ರಿಲ್ಲದುಣಬಾರದತಿಹಸಿದು ಕಣ್ಣಾಲ್ಲಿ ಹರಣವೀ ಹೋಯ್ತೆ
ಬಪ್ಪಾಗಳು।
ಎಲ್ಲಿಯುಂ ಭಕ್ತರಂ ಕಾಣದೆ ಬರುತ್ತ ನಿ
ನ್ನಲ್ಲಿಗೆಯ್ತಂದೆನಿದಕೋ ತಂದೆಯೆಂದೊಡಾ
ನೊಲ್ಲೆನೆಲೆಯಯ್ಯ ಮತ್ತೊಬ್ಬರಂ ಗಳಿಸಿಕೊಳ್ಳೆಂದೆನುತ
ನಡೆಗೊಂಡನು ॥ ೩೮ ॥

ದುಡುದುಡನೆ ದಾರಿಗಡ್ಡ ಬಂದು ಹಸ್ತವಮಂ
ತುಡುಕಿ ಹಿಡಿದೇಕೊಲ್ಲೆ ತಂದೆ ಹೇಳೆನಲೊಲ್ಲೆ
ಬಿಡುಬಿಡೆನಗುಣಬಾರದೆಂದೊಡೇಕುಣಬಾರದೆಲೆ ಮರುಳು
ಮಗನೆಯೆನಲು।
ಮೃಡಸೋಮನಾಥನಂ ಕಂಡಬಳಿಕಲ್ಲದಿ
ನ್ನೆಡೆಯೊಳಳವಡೆದೆನಗೆ ನೇಮವಳಲಿಸದೆ ಬಿ
ಟ್ಟೊಡೆ ಸಾಕು ಹತ್ತು ಸೂಳುಣಲಿತ್ತವಂ ಕಾಡದೆಲೆ ದೇವ
ಕೇಳೆಂದನು ॥ ೩೯ ॥

ಮರುಳೆಯಿದಕೀಸು ಮಾತೇಕೆಮ್ಮ ಕಯ್ಯೊಳಿ
ದ್ದರೆ ಸೋಮನಾಥದೇವರು ನೇಮಮಾಡೆನು
ತ್ತೊರೆದಡೀ ಪರಿಯಲ್ಲ ಸೋಮನಾಥಂ ತನ್ನ ನಿಜಮೂರ್ತಿಯಂ
ತೋರಿಸಿ ।

ಕರುಣಿಸಿದೊಡಲ್ಲದಾನುಣ್ಣೆನೆನೆ ಹಸನಾಯ್ತು
ಕರುಣಿ ಕಾಣಿಸಿಕೊಳ್ಳದೇಕಿಪ್ಪನಿನ್ನು ಚ
ಚ್ಚರಗಾಣದೇಕಿಪ್ಪೆ ನೀನೆತ್ತಾ ಭಕ್ತನಾದಯ್ಯನಂ
ನಕ್ಕನು ॥ ೪೦ ॥

ನಗಲೇಕೆ ದೇವ ಮರಣಾಂತ್ಯದಿಂ ಮೇಲೆ ಮಾ
ತುಗಳುಂಟೆ ತನ್ನ ರೂಪಂ ಕಾಣಲೀಯದೊಡೆ
ಮಿಗೆ ಸಾಯಲೀಯನೇ ಬೆಂದ ಹುಣ್ಣಿಂ ಕಂಬಿಯಲಿ
ಕೀಸಲೇಕೆಂದೆನೆ ।

ನಗೆಯಲ್ಲ ನಿಷ್ಕರುಣಿ ದೇವನೆಂಬಾತ ನೀಂ
ಮಗುವು ಬಳಲಿದೆ ದೂರವೆಂದೆಮ್ಬೆಸಲ್ಲದೆಲೆ
ಮಗನೆ ಹಸಿದಿರಲಾಱೆ ಒಂದು ತುತ್ತಿಂ ಕೊಳ್ಳುದೆನಲೆಂದ
ನಾದಯ್ಯನು ॥ ೪೧ ॥

ಒಂದು ತಿಂಗಳ್ಗೆ ಸೌರಾಷ್ಟ್ರಪತಿ ಸೋಮನಂ
ತಂದಲ್ಲದುಣ್ಣೆನೆಂದತಿಭಾಷೆಯಂ ನುಡಿದು
ಬಂದುದಱೊಳ್ಳೆನೆನೆಯಕ್ಕಕ್ಕುಯೆನಿತು ದಿನ
ಪಿಂದಾದುದವಧಿಯೊಳಗೆ ।

ಮುಂದೆ ದಿನವೆರಡುಳಿಯೆ ದಿವಸವಿಪ್ಪತ್ತೆಂಟು
ಸಂದುದೆಂದೆನೆ ಕೈಯ ಬೆರಳ ಮೂಗಿಸ ಮೇಲೆ
ತಂದಿಟ್ಟು ಕೌತುಕಂಬಟ್ಟು ನುಡಿವಂ ಭಕ್ತನಾದಯ್ಯನಂ
ನೋಡುತ ॥ ೪೨ ॥

ಶ್ರೀರಿತ್ತ್ರವಧಿಯೆರಡುದಿನವುಳಿಯೆ ನೀ ಬಂದ
ದಾರಿಯರ್ಥಂ ಸವೆಯದಿನ್ನೆಂದು ನೀ ಹೋಗಿ
ಸೌರಾಷ್ಟ್ರದಿಂದ ಸೋಮಯ್ಯನಂ ತಪ್ಪೆಯುಂಡಿಲ್ಲಿಂದ
ಮರಳೆಂದೆನೆ ।

ಆರಾಧ್ಯರೀಶ್ವರಾರ್ಚಕರೆಂದು ನುಡಿದುದಂ
ಸ್ಯೈರಿಸಿದೆನಿನ್ನು ಬಿಜಯಂಗೈವುದೆನಲು ಮದ
ನಾರಿ ಮನದೊಳು ಮೆಚ್ಚಿ ಕೆಚ್ಚು ಹೃದಯಂ ಮತ್ತೆ
ನುಡಿದನಾದಯ್ಯನೊಡನೆ ॥ ೪೩ ॥

ನೀ ಮಗುವು ಮುಂದಱಿಯೆ ಹೋದೊಡೇನಹುದಲ್ಲಿ
ಸೋಮಯ್ಯನಂ ಕಂಡುಬಲ್ಲುದುಂಟೇಯೆಂದ
ಡಾಂ ಮುನ್ನ ಕಂಡಱಿಯೆನೆನಲಿನ್ನು ಕಂಡಱಿವುದಕ್ಕೆ
ತೆಱನಾವುದೆನಲು ।

ಸೋಮನಾಥಾ ಸೊಡ್ಡಳಾ ಸೋಯಿಗಾ ಸೋಮ
ಸೋಮಯ್ಯಯೆಂದು ನಾನೊಱಲುತಿರೆ ಬಂದು ಕೇ
ಳ್ದಾ ಮಹಾಮೂರ್ತಿಯಂ ಕರುಣದಿಂ ತೋಱಿಸಿದಡಾಂ
ಕಾಣಬಲ್ಲೆನೆನಲು ॥ ೪೪ ॥

ಆದೊಡೀಕ್ಷಿಸು ಸೋಮನಾಥನೆಂಬಾತ ನಾ
ನಿದ್ದೆನೆನೆ ನಿಮ್ಮ ರೂಪೆಮ್ಮ ಪುರಮರ್ದನನ
ಹೋದಹೊಲಬಲ್ಲ ಹುಸಿಯದಿರೆಂದೊಡಾತಂಗದಾವುದೈ
ಕುಱುಹೆಂದೆನೆ ।

ಆದ್ಯರುಂ ವೇದ್ಯರುಂ ಪೇಳ್ಪುದನು ಕೇಳಿ ನಾ
ನಾದಿಮಧ್ಯಾಂತರಹಿತನ ರೂಪ ಬಲ್ಲೆನೆನ
ಲಾದಿಮಯ್ಯನ ಮನದೊಳಿರ್ದ ನಿಜಮೂರ್ತಿಯಂ
ತೋಱಲುದ್ಯತನಾದನು ॥ ೪೫ ॥

ನಿಷ್ಠೆವಿಡಿದು ನಡೆದಂ ಧೀರಸಾದಯ್ಯನಾದಯ್ಯ 

ಜಡೆಗಳೆಡೆಯೊಳು ಸುಳಿವ ಗಂಗೆ ಗಂಗಾನದಿಯ
ತಡಿಯ ಶಶಿಸಸಿವೆಳಗು ಕವಿದ ಹೆಣೆಗಣ್ಣ ಕ
ಣ್ಕುಡಿವೆಳಗಿನಿಂ ತೊಳಪ ಮುಖ ಮುಖದ ಕೆಲದ ಕುಂಡಲ
ಕುಂಡಲದ ಕಾಂತಿಯ ।
ಕಡುಗಪ್ಪುಸುಗುಳ್ವ ವಿಷ ವಿಷಮಂ ಸವಿವ ರುಂಡ
ದೊಡಿಗೆ ತೊಡಿಗೆಗೆ ತಕ್ಕ ಪುಲಿದೊವಲು ತೊವಲನುಗಿ
ವಡೆವಾಯುಧಂಗಳಾಯುಧಂಗಳಾಯುಧವಿಡಿದ ದಶಭುಜದ
ನೀಱ ನಿಜಮಂ ತೋಱಲು ॥ ೪೬ ॥

ಮೀಱಿ ಕಂಡಂ ಕಂಡತನುವಿನೊಳು ಪುಳಕಮಂ
ಹೇಱಿದಂ ಸಂತಸವನೇಱಿದಂ ಜನನಮಂ
ಮಾಱಿದಂ ಕಳೆಗಳಂ ಬೀಱಿದಂ ವಿಪುಳ ಡಗೆಯಾಱಿದಂ
ಸಂಸಾರದಿಂ ।
ಜಾಱಿದಂ ನಿಷ್ಠೆಯಂ ತೋಱಿದಂ ಹಗೆಗಳಂ
ಕೇಱಿದಂ ಭಕ್ತಿಯಂ ಸಾಱಿದಂ ಚಿಂತೆಯಂ
ತೂಱಿದಂ ಶಿವನಡಿಗೆ ಮಾಱುಗೊಟ್ಟಂ ಮನವನ
ಪ್ರತಿಮನಾದಯ್ಯನು ॥ ೪೭ ॥

## ೪. ಕೆಂಡದ ತೊಡಿಗೆಗೆ ಮನವಿಟ್ಟೆರಗಿನ ಪುತ್ತಳಿ

ಶಶಿಬಿಂಬದವೊಟ್ಟಲೊ ಬೆಳುದಿಂಗಳ ಘಟ್ಟಿಯೊ
ವಿಷಗೊರಲನ ಕೀರ್ತಿಲತಾಕಂದವೊ ಲೋಕ
ಪ್ರಸರದ ಕಂಗಳ ಮಂಗಳದೊಬ್ಬುಳಿಯೋ ಭಕ್ತರ ಭಾಗ್ಯದ
ಹೆಬ್ಬೆಳೆಯೊ ।
ಹೊಸರಾಶಿಯೊ ವಸುಧೆಯ ಸಂತಸವೋಯೆಂದಂ
ಕಿಸಿ ಮೆಱೆದುದು ಕೈಲಾಸಂ ಶರ್ವನ ವಾಸಂ
ಲಸಿತಾಮರಕೋಶಂ ಮಾಯಾಸಂಕ್ಲೇಶಂ ಕುಧರಾಧೀಶಂ
ಕಡೆಗೆಯ್ಯೆಯ್ಯಾ ॥ ೧ ॥

ಗಗನವ ಬಗಿದೆಲ್ಲಾ ಲೋಕಂಗಳ ನೆತ್ತಿಗೆ
ನಿಗುರುವ ಗಿರಿಮುಖ್ಯನ ಮಕುಟವೊ ಪೇಳೆಂದೆನ
ಲಗಣಿತ ರವಿಬಿಂಬಂಗಳ ಬೆಳಗಂ ಬೀರುತ್ತೆಸೆಯಿತ್ತಭವನ
ಭವನ ।
ತೆಗೆ ಸಡಿಫಡ ಕುಡುಬೇಡುಪಮಾನವನೆನಲೋ
ಲಗಶಾಲೆ ಸುವರ್ಣದ ನವಮಣಿಗಳ ಪರಿಸದ
ಮೃಗಧರಕಾಂತದ ಚಿಂತಾರತ್ನದ ಭಿತ್ತಿಯೊಳೆಸೆಯಿತ್ತೇಂ
ಬಣ್ಣಿಪೆನು ॥ ೨ ॥

ವಿನುತಾವಾಸದ ನವಮಣಿಗಳಮಯ ಸಿಂಹಾ
ಸನದೊಳು ನೋಡುವ ಮಾತಾಡುವ ಕೈನೀಡುವ
ಸನುಮಾನಿಸಿ ಬಯಸಿತ ಸಲಿಸುತ್ತಿಹ ಕಲ್ಪದ್ರುಮವೆಂದೆನಿಸುವ
ಶಿವನು ।
ತನತನಗೋಲಗದೊಳ್ ನೆರೆದಿರ್ದೆಲ್ಲಾ ದೇ
ವನಿಕಾಯಂ ಪೊಗಳಲು ಮಂಗಳದರ್ಪಣದಂ
ತನುವರ್ತಿಸುತೊಪ್ಪಿದನಪ್ರತಿಮಂ ಸಕಲ ಚರಾಚರ
ಜನಸ್ಥಳನು ॥ ೩ ॥

ನಡುಗಣ್ಣುರಿಬಿಸಿಲಿಂ ಬಳಲುವ ಶಶಿಗಮೃತವ
ನಿಡುವೋಲ್ ಬಳಕುವ ಚಮರಿಯ ಪೊಸಸೀಗುರಿಗಳ
ಜಡಿಯಲ್ಕಡಗುವ ಫಣಿಗಳಿಗಾಹುತಿಗೊಡುವಂತಹ ವಿಜ್ಜನ
ಸತಿಯರೆನೆ |

ತೊಡಿಗೆಯ ನಾನಾದೇವರ ತಲೆಗಳು ನಾಚಲು
ಪಿಡಿದೆತ್ತಿದ ಮುಕುರಂಗಳ ಕಡುಮನ್ನಣೆಗಳ
ಮಡದಿಯರೊಪ್ಪಿದರು ವಸಂತನನುಪಚರಿಸುತ್ತಿಹ ವನ
ದೇವಿಯರಂತೆ ॥ ೪ ॥

ಎಡಬಲದೊಳು ಕೈಮುಗಿದಿಪ್ಪ ಹರಿಬ್ರಹ್ಮರ
ನಡುವಣ ಸಾಲೋಕ್ಯರ ನಿಕರದ ಸಾಮಿಪ್ಯರ
ತೊಡೆಸೋಂಕಿನ ಸಾರೂಪ್ಯರ ಬೆರಸಿಹ ಸಾಯುಜ್ಯರ ಸುತ್ತಣ
ಗಣಕುಲದ |

ಕಡೆಗಂಗಳೊಳಾಡುವ ಸಿರಿಸರಸತಿಯರ ಸಾ
ಲ್ವಿಡಿದಿಹ ಸರ್ವಾಮರ ನಿಚಯದ ಮುಂದೆ ಥರಂ
ಬಿಡಿದಷ್ಟ ದಿಶಾಧಿಪರ ಬಳಸಿದ ಮನುಮುನಿತತಿಯಿಂ
ಸಭೆಯೊಪ್ಪಿದುದು ॥ ೫ ॥

ಸುತ್ತುಗೆಯೊತ್ತಂ ಬಡಿಯುತ್ತಿರ್ದ ಗಣಂಗಳ
ಮೊತ್ತದ ಮಕುಟಂಗಳ ಕುತ್ತಾರಕ್ಕೆತ್ತಂ
ಹೊತ್ತು ತಳರ್ತಸಿಲತೆಗಳ ಕವಿದೆಡೆಗಿಡಿದಡಸಿದ
ದೀಪಾವಳಿಯೆಸೆವ |

ಭಿತ್ತಿಯ ಶಶಿಕಾಂತದ ತೊಡಿಗೆಯ ಸತಿಯರ ಸಂ
ಪತ್ತಿನ ಬೆಳತಿಗೆವೆಳಗಿನೊಳತಿ ಮಂಗಳಮಯ
ವೆತ್ತಿರ್ದಂ ಜಿತದೂಷಣನತಿಭೀಷಣನಘಶೋಷಣ
ನಹಿಭೂಷಣನು ॥ ೬ ॥

ಏಳಂಬುಧಿ ಪರಿವೃತದ ಧರಾತಳದೊಳಗೆ ನೃ
ಪಾಲರುಗಳನವರಿವರೆಂದೆನ್ನದೆ ನೆಱೆನಿ
ಮೂಱಲಂಗೆಯ್ದಿಸುವೆನ್ನಿಂ ನಿಜವಿಜಯ ಭುಜಾದಂಡವ
ಮಂಡಿಸಿ ಮೆಱೆದಾ ।
ಬಾಳ ಬಲಾಢ್ಯತೆಯಂ ತೋಱಿಸಿ ನಾನಾ ಭುವ
ನಾಳಿಯ ದೇವರ ಕೆಯ್ಯೈಭಿಷೇಕ ಪಯಃಕಣ
ಜಾಳದ ಜಯಸೇಸೆಯ ತೋಱುವೆನೆಂದಸುಗೆಯ್ದಂ ದಕ್ಷಪಿತಾ
ಮಹನು ॥ ೭ ॥

ಭಾರತಿ ನೀಡುವ ವೀಣಾರವಮಂ ತುಂಬುರ
ನಾರದರಾಣತಿಯಂ ನಂದಿ ಮಹಾಕಾಳರ
ಪೂರಾಯದ ಗತಿಯಂ ರಂಭೆಯ ಕೇಳಿಕೆಯಂ
ಭೃಂಗೀಶನ ನರ್ತನಮಂ ।
ವಾರಿಜಪುತ್ರನ ವೇದನ ಚಂಡೇಶನ ಕೈ
ವಾರವನಾಲಿಸುತಾನಂದದೊಳಖಿಳಕ್ಕಾ
ಧಾರಂ ಭವದೂರಂ ಸುಖಸಾರಂ ಮಹಿಮಾಗಾರಂ
ಮೆಱೆದಿರುತಿರಲು ॥ ॥

ಸರಸಿಜಭವ ಸರಸಿಜಲೋಚನ ಸರಸಿಜರಿಪು
ಸರಸಿಜಮಿತ್ರಂ ಮೊದಲೆಂದೆನಿಪೆಲ್ಲಾ ದೇ
ವರ ಲೋಕಂಗಳ ಹೊಕ್ಕುವರವರುಪಚರಿಸಿದ ಸನುಮಾನದ
ವಂದನೆಯ ।
ಹರಕೆಯನಭಿಷೇಕವ ಸೇಸೆಯನುಡು
ಗೊರೆಯಂ ಭರವಸದಿಂ ಕೈಕೊಳುತಿನ್ನುಳಿದಾ
ಸುರಪರಿವೃತ ಪರಮನನೆಱಗಿಸಿಕೊಂಬಾಸಕ್ತಿಯೊಳೆಯ್ದಿದನಾ
ಸಭೆಗೆ ॥ ೯ ॥

ತಾವರೆಗಣ್ಣಂ ಮೊದಲಾದಾ ಸುರರೆಜಗುವ
ದೇವರದೇವಂಗೆಯ್ತಂದೆಜಗದೆ ಮುದದಿಂ
ತಾವೈವೇದಂ ಶ್ರುತಿಸುವನಂ ತುತಿಸದೆ ಮುನಿಗಳು ಚಿತ್ತದ
ಕಂಗಳಲಿ |
ಭಾವಿಸಿ ನೋಡುವನಂ ನೋಡದೆ ಮದದಿಂ ಗ
ರ್ವಾವಿಷ್ಟಂ ಶಿವನಿಂ ವಂದಿಸಿಕೊಳಲೆಳಸಿದ
ನೇವೇಳ್ವೆಂ ಕೆಂಡದ ತೊಡಿಗೆಗೆ ಮನವಿಟ್ಟರಗಿನ ಪುತ್ತಳಿ-
ಯೆಂತಂತೆ ॥ ೧೦ ॥

ಘನತೂರ್ಯತ್ರಯಮಂ ನೋಡುವ ಭರದಿಂ ಪ
ಕ್ಷನನಭವಂ ಮುನ್ನಿಸ ಮಱೆವನೆನಿಪ್ಪುದು ಪುಸಿ
ತನುವಿನ ರೋಮಂಗಳೊಳೊಂದೊಂದಱ ಮೇಲೊಂದೊಂದಂ
ಮುಟ್ಟದ ಕಡೆಗೆ |
ಬಿನದದಿ ಹರಿದಾಡುವ ಕೋಟಿ ಬ್ರಹ್ಮಾಂಡದ
ನೆನಪಿಲ್ಲೆನಲಂತವಱೊಳಗೊಂದರ ಕಡೆಗೊಂ
ಟಿನ ಹಳ್ಳಿಯ ಹೊಳ್ಳುಗಳೊಂಬತ್ತರೊಳೊಬ್ಬನನಿವನಂ
ಬಲ್ಲನೆ ಶಿವನು ॥ ೧೧ ॥

ಮರುಳಂ ಬಗೆಯದೊಡೇಂ ಬಗೆಯಳೆ ಮಗಳೆಂದಾ
ತರುಣಿಯನಾಲಿಸಿ ಪತಿಯಾದರಿಸದವರನಾ
ದರಿಪುದು ಸತಿಗತಿಹಿತವಲ್ಲೆಂದೊಲ್ಲದೆ ನಿಂದಳೊಯಂತಲ್ಲದೆ
ಬೇಱೆ |
ಧರಣೀಶನ ಮಕುಟದ ಕಳಶದ ಮುತ್ತಿಳಿದಾ
ದರದಿಂ ತಾಂ ಜನಿಸಿದ ಸಿಂಪಂ ಕಂಡಂತೆ ವೊ
ಲಿರೆ ನಿಂದಂ ದಕ್ಷಂ ಮಂದಿಯ ವಂದನೆಗೊಸೆದಾ ಸಭೆಯಂ
ನೋಡಿದನು ॥ ೧೨ ॥

ಎಂತಹ ಪಾತಕವಂ ಮಾಡಿದನೋ ಮಾಡದೊ
ಡಿಂತೀ ಶಿವನುಂ ಶಿವೆಯುಂ ಮನ್ನಿಸರೇಕಿವ
ನಂತಸ್ಥವನಱಿಯದೆ ನಮಿಸುವುದನುಚಿತವೆಂದೊಲ್ಲದೆ ಸಭೆ ಸುಮ್ಮನಿರೆ ।
ಚಿಂತಾಕುಂತಂ ತನುವಂ ತಟ್ಟಲ್ ಬಳಿಕಂ
ತಿಂತೆಂದುಪಮಿಸಬಾರದ ಸಂತಾಪದೊದವ
ಮಂತಣಗೃಹಕ್ಕೈತರುತಿರ್ದಂ ಕೋಪಾವೇಶದೆ ಮುಂದರಿಯದ ಖಳನು ॥ ೧೩ ॥

ಕಱೆಗಟ್ಟಿದ ಬಿರುಗೋಪದ ಮಱಹಿಂದಂ ಮುಂ
ದಱಿಯದೆ ಪೊಱಮಟ್ಟೆನೆನುತ್ತಂ ತನ್ನಂ ತಾಂ
ಹುಱಿಗುಟ್ಟಿಕೊಳುತ್ತಂ ಪೆಱರ ಧನಿಯಾದರೆ ಕರೆಯರಲಾ ಎಂದೆನುತ ।
ಕಿಱಿದೆಡೆಯಂ ನಡವುತ್ತಂ ನಿಂದಿರುತಂ ಕುಱು
ಕುಱು ಮೆಟ್ಟುತ ಬರ್ಪವರಂ ಮಿಗೆ ಬಗೆವುತ್ತಂ
ನೆಱೆ ಸುಯಿವುತ್ತಂ ಬೈವುತ್ತಂ ಜಿನುಗುತ್ತಂ ನಡೆದಂ ಪಾಪಾತುರನು ॥ ೧೪ ॥

ಪಱಿಪಱಿಸುವ ಭೂಪಾಲನದಿದೆನ್ನದೆ ತ
ತ್ರುಱಿದಱಿದಮರರನೆಱಗಿಸಿಕೊಂಡೆನ್ನಧಟನ
ಹಱಿವಡೆಗೀ ಬನ್ನಂ ಬಂದೆಮಗಿನ್ನಿರವೇತಕ್ಕೆಂಬುಬ್ಬೆಗದಲಿ ತಾಂ ।
ನೆಱೆ ಚೇತರಿಸಿದ ಚಿಂತಾಚಿತ್ರವೊ ಸಲೆ ಸೈ
ವೆಱಗಿನ ಸಾಕಾರವೊ ಕೋಪದ ಕರುವಿನ ಕಂ
ದೆಱವೆಯೊ ಎಂಬಂತಿರೆ ಬಂದಂ ಪುರವೊಕ್ಕಂ ನಿಂದಂ ನಿಜಭವನದಲಿ ॥ ೧೫ ॥

# ಪೂರ್ವ ಕಥೆ

## ಹಿಂದೊಬ್ಬ ಸಾನಂದನೆಂಬ ಶಿವಯೋಗಿ........(೨.೨೦)

ಶಿಲಾದ ಮುನಿಗೆ ಶಿವನ ಅನುಗ್ರಹದಿಂದ ನಂದಿ, ಪರ್ವತ, ಭೃಂಗಿ ಎಂಬ ಮೂವರು ಮಕ್ಕಳು ಹುಟ್ಟಿದರು. ಭೃಂಗಿಯು ಕೃತಯುಗದಲ್ಲಿ ಸುಕೇಶನೆಂಬ ಹೆಸರಿನಿಂದ ಹುಟ್ಟಿದನು. ತ್ರೇತಾಯುಗದಲ್ಲಿ ಆತ ಸಾನಂದ ಗಣೇಶನಾಗಿ ಹುಟ್ಟಿ, ಶಿವ ಧರ್ಮ ಶಾಸ್ತ್ರದಲ್ಲಿ ಬರುವ ನರಕವರ್ಣನೆಯನ್ನು ಕೇಳಿ ನಾರಕಿಗಳನ್ನು ಮೇಲೆತ್ತಲು ನಿರ್ಧರಿಸಿದನು. ಯಮನ ಪಟ್ಟಣಕ್ಕೆ ಬಂದು 'ನಮಃ ಶಿವಾಯ' ಎಂಬ ಪಂಚಾಕ್ಷರೀ ಮಂತ್ರವನ್ನು ನಾರಕಿಗಳ ಬಾಯಲ್ಲಿ ಹೇಳಿಸಿ ಅವರನ್ನು ನರಕದಿಂದ ಉದ್ಧರಿಸಿದನು. ಹೀಗೆ ಪಂಚಾಕ್ಷರೀ ಮಂತ್ರೋಚ್ಚಾರಣೆಯಿಂದ ನಾರಕಿಗಳನ್ನು ಮೇಲೆತ್ತಿದ ಸಾನಂದ ಗಣೇಶನು ಅವರಿಗೆ ಕೈಲಾಸಪದವಿಯನ್ನು ಅನುಗ್ರಹಿಸಿ ತಾನೂ ಅಲ್ಲಿಯೇ ನಿಂತನು.

# ಗ್ರಂಥ ಸೂಚಿ


1. ಹರಿಶ್ಚಂದ್ರಕಾವ್ಯ — ಸಂ: ಎನ್. ಬಸವಾರಾಧ್ಯ ಮತ್ತು ಪಂಡಿತ ಎಸ್. ಬಸಪ್ಪ
2. ಹರಿಶ್ಚಂದ್ರಕಾವ್ಯಸಂಗ್ರಹ — ಸಂ: ಎ. ಆರ್. ಕೃಷ್ಣಶಾಸ್ತ್ರಿ
3. ಸಿದ್ಧರಾಮ ಚಾರಿತ್ರ — ಸಂ: ಟಿ. ಎಸ್. ವೆಂಕಣ್ಣಯ್ಯ ಹಾಗೂ ಡಿ. ಎಲ್. ನರಸಿಂಹಾಚಾರ್
4. ಸೋಮನಾಥ ಚಾರಿತ್ರ — ಸಂ: ಡಾ. ಆರ್. ಸಿ. ಹಿರೇಮಠ ಹಾಗೂ ಡಾ. ಎಂ. ಎಸ್. ಸುಂಕಾಪುರ
5. ವೀರೇಶ ಚರಿತೆ — ಸಂ: ಬಿ. ಶಿವಮೂರ್ತಿ ಶಾಸ್ತ್ರೀ
6. ಮಹಾಕವಿ ರಾಘವಾಂಕ — ಡಾ. ಆರ್. ಸಿ. ಹಿರೇಮಠ
7. ಪರಿಶೀಲನ — ಡಾ. ಜಿ. ಎಸ್. ಶಿವರುದ್ರಪ್ಪ
8. ಕಾವ್ಯವಿಹಾರ — ಕುವೆಂಪು
9. ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ — ಪ್ರೊ. ಬಿ. ವಿ. ಮಲ್ಲಾಪುರ
10. ಕನ್ನಡ ಸಾಹಿತ್ಯ ಚರಿತ್ರೆ — ಡಾ. ರಂ. ಶ್ರೀ. ಮುಗಳಿ
11. ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ — ತ. ಸು. ಶಾಮರಾಯ ಹಾಗೂ ಮೇ. ರಾಜೇಶ್ವರಯ್ಯ

# ಅರ್ಥಕೋಶ

ಅ

ಅಗಳು (೨.೧೨) ಹಳ್ಳ
ಅಗುಡು (೩.೨೨) ?
ಅಘಂಕೆಡದು (೨.೨೮) ಪಾಪಗಳು ನಾಶವಾಗವು
ಅಟ್ಟುಳಿ (೧.೫೮) ತೊಂದರೆ, ಹಿಂಸೆ
ಅಡಕ (೧.೩೦) ಆಧಿಕ್ಯ
ಅಡಪು (೧.೩೨) ಅಡವು, ಆಶ್ರಯ
ಅಡಸು (೩.೩೪ ಒಟ್ಟು, ಒಂದರ ಮೇಲೊಂದು ಇಡು
ಅತೀತ (೨) ಮೀರಿದ
ಅಧಿಕರಣ (೨.೧೦) ಅಧಿಕಾರ
ಅರ್ಥ (೧.೧) ಐಶ್ವರ್ಯ
ಅನಲ (೧.೧೪) ಅಗ್ನಿ
ಅನಾಮಿಕ (೧.೪೫) ಹೊಲೆಯ
ಅನಿಲ (೧.೪) ವಾಯು
ಅನ್ಯಾಯಶತ (೨.೨) ನೂರು ರೀತಿಯ ಅನ್ಯಾಯ
ಅಪಕರ್ಷಣೆ (೧.೨೫) ಹೋಗಲಾಡಿಸುವವಳು
ಅಬುಜಭವ (೭) ಬ್ರಹ್ಮ
ಅಭಿರಾಮ (೩.೨) ಸುಂದರ, ಮನೋಹರ
ಅಮರಕೋಶಂ (೪.೧) ದೇವತೆಗಳು ಒಟ್ಟಾಗಿ ಸೇರಿರುವ ಸ್ಥಳ
ಅಮ್ಮೆನ್ (೩.೧೩) ಸಮರ್ಥವಾಗೆನು
ಅರವರಿಸದೆ (೨.೧೧) ವಿಚಾರಮಾಡದೆ
ಅರುಹತರು (೩.೨೮) ಜೈನರು
ಅಱಿವು (೩) ಜ್ಞಾನ
ಅಱಿವುಗೆಡು (೩.೨೯) ಜ್ಞಾನತಪ್ಪು
ಅಱುಪಲ್ (೧.೧) ತಿಳಿಸಲು
ಅಜಿಯಾಯ್ತು (೨.೨೦) ನಾಶವಾಯಿತು
ಅಜಿಯಟ್ಟು (೩.೩೩) ಬೆನ್ನಟ್ಟು
ಅಲಗು (೨.೧೧) ಆಯುಧ, ಕತ್ತಿ
ಅಲಸಿ (೧.೫೯) ಹಿಂದೆಗೆದು
ಅವಗಾಹ (೧.೨೬) ಸ್ನಾನ
ಅಸವಸ (೧.೫೯) ತ್ವರೆ, ಅವಿಚಾರ
ಅಸಿವೊಯಿಲ್ (೩.೨೩) ಖಡ್ಗಪ್ರಹಾರ
ಅಸು (೩.೨೩) ಪ್ರಾಣ
ಅಸುಗತಿ (೨.೧೮) ಜೀವಸ್ಥಿತಿ
ಅಸುವಜಿ (೩.೩೧) ಪ್ರಾಣ ಪುರೆಯಾಗಿ, ಪ್ರಾಣ ಹೋಗಿ
ಅಳಲಿಸದೆ (೩.೧೦) ಗೋಳಾಡಿಸದೆ, ಚಿಂತೆಗೊಳ್ಳದೆ
ಅಳಲಿಸು (೧.೫೫) ವ್ಯಥೆಪಡಿಸು
ಅಳಲು (೨.೨) ದುಃಖ
ಅಳವಿ (೩.೩) ಅಳತೆ
ಅಳವು (೧.೫೧) ಶಕ್ತಿ, ಸಾಮರ್ಥ್ಯ
ಅಳಿ (೧.೫೯) ನಾಶಮಾಡು, ಕೊಲ್ಲು
ಅಳುಪು (೧.೬೧ ; ೩.೧೯) ಆಸೆಪಡು
ಅಂಕಿಸಿ (೪.೧) ಗುರುತಿಸಿ
ಅಂಗವಿಸು (೩.೧೦) ಮೈಯೊಡ್ಡು, ಎದುರಿಸು
ಅಂಡಲೆ (೩.೧೭) ಪೀಡನೆ, ತೊಂದರೆ
ಅಂತಸ್ಥ (೪.೧೩) ಅಂತರಂಗ
ಅಂಬುರಾಶಿ (೩.೮) ಸಮುದ್ರ

## ಆ

ಆರ್ತ (೨.೨೬) ಅಭಿಲಾಷೆ, ಬಯಕೆ
ಆದ್ಯರು (೩.೪೫) ಪುರಾತನರು
ಆರ್ಜ್ (೩.೪೧) ಸಮರ್ಥನಾಗು
ಆಜಿದೆ (೨.೧೫) ಸಮರ್ಥನಾಗದೆ
ಆರಾಧ್ಯ (೩.೪೩) ಪೂಜ್ಯನಾದ, ಸೇವೆಗೆ ಅರ್ಹನಾದ
ಆಜು (೩.೩೧) ಒಣಗು, ಬತ್ತು
ಆಪರಿಸುವ (೧) ವ್ಯಾಪಿಸುವ
ಆವಿಗೆ (೩.೨೪) ಕುಂಬಾರನು ಮಡಕೆಗಳನ್ನು ಸುಡುವ ಒಲೆ
ಆಶಾಮಯ (೨) ಆಸೆಯೆಂಬ ರೋಗ
ಆಸತ್ತು (೩.೨೯) ಆಯಾಸಪಟ್ಟು, ದಣಿದು

## ಇ

ಇಟ್ಟೊರಸು (೧.೪೨) ಈಟಿಯಂತೆ ತೀಡು
ಇಡುಕುಱು (೧.೫ ; ೧.೧೪) ದಟ್ಟವಾದ ಪ್ರದೇಶ
ಇರುವು (೪.೧೫) ಇರುವಿಕೆ
ಇಱುಕಿಕೊಂಡು (೨.೧) ತುರುಕಿಕೊಂಡು
ಇಱುಬು (೧.೫) ಸಂದು, ಇಕ್ಕಟ್ಟಾದ ಪ್ರದೇಶ

## ಈ

ಈಗೆ (೨) ಕೊಡಲಿ, ಅನುಗ್ರಹಿಸಲಿ
ಈರೇಳು (೧.೪೩) ಹದಿನಾಲ್ಕು
ಈಹ (೧.೫೩) ಕೊಡುವಿಕೆ
ಈಂಟು (೧.೫೭) ಕುಡಿ

## ಉ

ಉಗ್ರ (೨.೫) ಕೋಪ
ಉಗ್ಗಡ (೬) ಅಧಿಕ, ಹೊಗಳಿಕೆ
ಉಗಿ (೩.೪೬) ಕಿತ್ತು ತೆಗೆ
ಉಡುಪತಿ (೧) ಚಂದ್ರ
ಉಡುಹು (೩.೨೫) ಅಲಗಿಹೋಗು
ಉತ್ತರಿಸು (೧.೪೨ ; ೨.೩೩) ದಾಟು
ಉತ್ಸವ (೩) ಸಂತೋಷ
ಉದ್ದಾಮ (೨) ಶ್ರೇಷ್ಠ
ಉಪಮಿಸಬಾರದ (೪.೧೩) ಹೋಲಿಸಲಾಗದ
ಉಪವೀತ (೩.೩೫) ಜನಿವಾರ
ಉಪ್ಪರ (೧.೩೧) ಎತ್ತರ
ಉಬ್ಬೆಗ (೪.೧೫) ಉದ್ವೇಗ, ಕಳವಳ, ಚಿಂತೆ
ಉರವಣಿಸಿ (೧.೨೪ ; ೨.೧) ವೇಗವಾಗಿ, ತೀವ್ರವಾಗಿ
ಉರವಣಿಯ (೨.೨೧) ಹೆಚ್ಚಿನ
ಉರುವ (೨.೩) ಶ್ರೇಷ್ಠ
ಉಜ಼ (೧.೬ ; ೩.೨೫) ಅಧಿಕವಾದ, ವಿಶೇಷವಾದ

## ಎ

ಎಕ್ಕವಿಂಡು (೨.೧ ; ೨.೩) ಗುಂಪು, ಶಿಷ್ಯ ಸಮೂಹ
ಎಡೆಗೊಂಡ (೧.೪೮) ಆಶ್ರಯಿಸಿದ
ಎಱಗಿಸಿಕೊಂಬ (೪.೯) ನಮಸ್ಕರಿಸಿಕೊಳ್ಳುವ
ಎಱ಼ (೧.೬೧) ಒಡೆತನ
ಎಲರ್ (೩.೨೩) ಗಾಳಿ
ಎಲೆಗೆ (೧.೪೦) ಹೆಂಗಸರನ್ನು ಸಂಬೋಧಿಸುವಾಗ ಬಳಸುವ ಮಾತು
ಎಸೆವ (೨.೧) ಕಂಗೊಳಿಸುವ
ಎಳಸಿ (೩.೫) ಅಪೇಕ್ಷಿಸಿ, ಬಯಸಿ
ಎಂತಕ್ಕೆ (೩.೨೫) ಹೇಗೋ
ಎಂದುವರೆ (೩.೨೪) ಎಲ್ಲಿಯುವರೆಗೆ

## ಏ

ಏಗುವೆನ್ (೩.೨೯) ಏನು ಮಾಡಲಿ

ಏಱು (೩.೨೫) ಗಾಯ

## ಐ

ಐದೆ (೨.೭) ಚೆನ್ನಾಗಿ

## ಒ

ಒಗರ್ಗಡಿಸು (೧.೫) ಬಾಗು, ಓರೆಯಾಗು

ಒಟ್ಟಿಲ್ (೪.೧) ರಾಶಿ

ಒಡಂಬಟ್ಟು (೧.೧) ಒಪ್ಪಿ

ಒದವು (೪.೧೩) ಉಂಟಾಗು, ಹೆಚ್ಚಳ

ಒಬ್ಬುಳಿ (೪.೧) ಒಟ್ಟುಗೂಡುವಿಕೆ

ಒಪ್ಪ (೧.೩೦ ; ೩.೧) ಸೌಂದರ್ಯ

ಒಪ್ಪು (೩.೧) ಸೊಗಸು

ಒಮ್ಮಳ (೩.೨೮) ಒಂದು ಮೊಳ

ಒಱಲು (೧.೩೫ ; ೨.೨೧ ; ೩.೨೮) ಅರಚು, ವೇದನೆಯಿಂದ ಕೂಗು

ಒರೆ (೩.೪೦) ಹೇಳು

ಒಱೆಗಟ್ಟು (೧.೫೯) ಕತ್ತಿಕಟ್ಟು, ಎದುರು ಬೀಳು

ಒಸೆದು (೪.೧೨) ಪ್ರೀತಿಪಟ್ಟು, ಇಚ್ಛಿಸಿ

ಒಳವು (೩.೧೫) ಇರುವುವು, ಉಂಟು

## ಓ

ಓಗರ (೩.೩೮) ಅನ್ನ

ಓವಿ (೧.೫೫ ; ೨.೮) ಪ್ರೀತಿಯಿಂದ

ಓಸರಿಸು (೧.೪೮) ಹಿಂದೆಗೆ

## ಕ

ಕಡಗಿ (೧.೧೭) ಅತಿಶಯವಾಗಿ

ಕಡ್ಡಣಿಗೆ (೧.೪೬) ಜಡೆಗಟ್ಟು

ಕಡುಗುಂದು (೩.೨೮) ತೀವ್ರವಾಗಿ ಕುಂದು

ಕಡುಗಿ (೩.೧) ರಭಸದಿಂದ, ಉತ್ಸಾಹದಿಂದ

ಕಡುಮುಳಿದು (೧.೪೭) ತೀವ್ರವಾಗಿ ಸಿಟ್ಟಾಗಿ

ಕಡೆ (೧.೪೮) ಕೊನೆ

ಕರ್ಣಿಕೆ (೩.೩) ತಾವರೆಯ ಒಳಗಿನ ಗೊಂಡೆ

ಕದುಬು (೧.೧೫) ಮುತ್ತು, ಆವರಿಸು

ಕಮ್ಮರಿ (೧.೪) ಪ್ರಪಾತ

ಕರ (೩.೧೪ ; ೩.೧೯) ಅತಿಶಯ, ವಿಶೇಷ

ಕರಣ (೨.೨೨) ಮನ

ಕರವೊತಿಗೆ (೩.೩೫) ಯತಿಗಳ ಚೀಲ (?)

ಕವಿ (೩.೧೮) ಆವರಿಸು, ಮುಚ್ಚು, ಮುತ್ತು

ಕಳವು (೨.೩) ಕಳ್ಳತನ

ಕಾಲ (೧.೪೫) ಯಮ

ಕಾಹು (೧.೬೧) ಕಾವಲು

ಕಾಹೊನಲ್ (೧.೪೧) ಕಾಡಿನ ಪ್ರವಾಹ

ಕೀಸು (೩.೪೧) ಗೀರು

ಕುತ್ತ (೧.೫೨) ರೋಗ

ಕುತ್ತಾರ (೪.೬) ಗುಂಪು

ಕುತ್ತುಱು (೧.೫ ; ೧.೧೪) ಪೊದರು

ಕುಧರ (೧.೨೫) ಪರ್ವತ

ಕುಲಿಶ (೧.೨೫) ವಜ್ರಾಯುಧ

ಕೂಪ (೨.೨೧) ಬಾವಿ

ಕೂರ್ (೩.೧೨) ಹರಿತ

ಕೃತಕೃತ್ಯ (೮) ಧನ್ಯ

ಕೆಡೆಹೊಯ್ದು (೧.೪೧) ನೆಲಕ್ಕೆ ಬೀಳುವಂತೆ ಹೊಡೆದು

ಕೇಳಿಕೆ (೪.೮) ಆಟ, ಕುಣಿತ

ಕೈವಾರ (೪.೮) ಹೊಗಳಿಕೆ

ಕೊಕ್ಕರಿಸು (೧.೫೮ ; ೨.೨೧) ಅಸಹ್ಯಪಡು

ಕೊಸರು (೧ ೬೨) ಕೂಗು
ಕೊಳ್ (೩.೧೯) ಹಿಡಿ, ಅತಿಕ್ರಮಿಸು
ಕಂಕರಿಗೋಲು (೧.೬೨) ಉದ್ದನೆಯ ಕೋಲು (?)
ಕಂಟಣಿಸು (೩.೧೭) ಬೇಸರಪಟ್ಟುಕೊಳ್ಳು
ಕುಂತ (೪.೧೩) ಒನಕೆ
ಕುಂಬಿಡು (೩.೩೪) ಮಣಿಸು, ತಗ್ಗಿಸು
ಕೆಂಗಲಿಸಿ (೩.೨೫) ಕೆಂಪಗೆ ಕಾಣು
ಕ್ಲೇಶ (೫) ದುಃಖ, ಸಂಕಟ, ವ್ಯಥೆ, ನೋವು
ಕ್ಷೋಣಿ (೩) ಭೂಮಿ
ಕ್ಷುತ್ಪಿಪಾಸೆ (೧.೩) ಹಸಿವು ಬಾಯಾರಿಕೆ

## ಖ

ಖಗ (೧.೪೪) ಸೂರ್ಯ
ಖಗ (೧.೪) ಪಕ್ಷಿ

## ಗ

ಗಡಿಗೆಟ್ಟ (೧.೩೧) ಅಸಂಖ್ಯಾತವಾದ (?) ಅಸ್ತವ್ಯಸ್ತವಾದ (?)
ಗಳಿಗೆ (೧.೫೫) ೨೪ ನಿಮಿಷಗಳ ಕಾಲ
ಗಾವದಿ (೧.೫೮) ಮೂಢ
ಗುಡ್ಡ (೨.೧) ಶಿಷ್ಯ
ಗುಡ್ಡಿಹಸು (೬) ಪುಟ್ಟಹಸು
ಗೊಡ್ಡಾಟ (೧.೫೧) ಕಾಟ, ಪೀಡನೆ

## ಘ

ಘಲ್ಲಣೆ (೨.೪) ತೀವ್ರತೆ, ಹೆಚ್ಚಳ. ಅತಿಶಯತೆ

## ಚ

ಚಳಿ (೩.೨೨) ಹಬ್ಬಿರು, ತುಂಬಿರು, ಸೂಸು

ಚಾರು (೨.೧೪) ಸುಂದರ, ಮನೋಹರ

## ಛ

ಛಿದ್ರಿಸು (೫) ಕುಂದುಕೊರತೆಗಳನ್ನು ತೋರಿಸು

## ಜ

ಜಜಿ (೧.೪೯) ಹಳಿ, ನಿಂದಿಸು, ಹೀನೈಸು
ಜಿತಕಾಮ (೨) ಮನ್ಮಥನನ್ನು ಗೆದ್ದ ಶಿವ

## ಝ

ಝಂಕಿಸು (೧.೪೮) ಗದರಿಸು, ಬಯ್ಯು

## ಡ

ಡಗೆ (೩.೨೫) ನೀರಡಿಕೆ
ಡೆಂಡಣಿಸು (೩.೨೩) ಶಕ್ತಿಗುಂದು, ದುಃಖಾವಿಷ್ಟನಾಗು
ಡೊಂಗರ (೧.೫) ಇಳಿಜಾರಾದ ಬಂಡೆ

## ತ

ತಕ್ಕು (೩.೨೮) ಸಾಮರ್ಥ್ಯ
ತಕ್ಕೈಸಿ (೨.೧೮) ಆಲಂಗಿಸಿ
ತಗುಳ್ (೧.೪೩) ದೂಡು, ಮೇಲೆ ಬೀಳು
ತರಹರಿಸು (೧.೪೬) ತತ್ತರಿಸು
ತಪ್ಪಾಗ ೨.೨೦) ಕರೆದು ತರುವಾಗ
ತಮ್ಮಡಿ (೩.೩೪) ಭಕ್ತ
ತರಣಿ (೧.೪) ಸೂರ್ಯ
ತರಹರ (೨.೨೪) ಸಮಾಧಾನ, ಶಾಂತಿ
ತಲೆ ಮುಟ್ಟ (೧.೫೮) ತಲೆಯ ಮೇಲೆ ಹೊತ್ತುಕೊಂಡು (?)
ತವಗ (೧.೬೫) ಉಚ್ಚಾಸನ
ತವಿಲ್ (೧.೨೬) ನಾಶ
ತಳುವು (೧.೩೦) ತಡಮಾಡು

ತಂದಾ (೨.೨೬) ತಂದೆಯಾ
ತಾಣ (೩) ನೆಲೆ
ತಾವರೆಗಣ್ಣನ ರಾಣಿ (೩) ಲಕ್ಷ್ಮಿ
ತೀಡು (೩.೩೪) ಬೀಸು
ತೀವು (೧.೨೩ ; ೧.೫೮) ತುಂಬು
ತುಡುಕಿ (೧.೧೧) ಹಿಡಿದು, ಮುಟ್ಟಿ
ತುಡುಕಿ (೩.೧ ; ೩.೩೯) ಮೇಲೆಬಿದ್ದು
ತುಱುಗು (೨.೨೩ ; ೩.೧೮) ಗುಂಪಾಗು, ಒತ್ತಾಗಿ ಸೇರು
ತೃಣ (೫) ಹುಲ್ಲುಕಡ್ಡಿ
ತೃಷೆ (೧.೧೩) ಬಾಯಾರಿಕೆ
ತೆಕ್ಕೆ (೧.೫೧) ಬೆದರು
ತೆಗೆಬಗೆಯಾಗು (೩.೨೩) ತತ್ತರಿಸು
ತೆಱಕಾಱ (೧.೪ ; ೧.೭) ಹಣವನ್ನು ವಸೂಲು ಮಾಡುವವನು
ತೆಱನ್ (೩.೨೬ ; ೩.೪೪) ರೀತಿ, ಮಾರ್ಗ, ದಾರಿ
ತೆಱೆ (೧.೬೩) ಸುಂಕ
ತೆಂಕಣ (೩.೭) ದಕ್ಷಿಣ
ತೊವಲು (೩.೪೬) ಚರ್ಮ
ತೊಂಗಲು (೩.೪) ಗೊಂಚಲು

## ದ

ದಡದಡಿಸು (೧.೪೬) ನಡುಗು
ದಾವತಿ (೩.೧೦) ಆಯಾಸ, ಶ್ರಮ
ದಿವಸ್ಪತಿ (೧) ಸೂರ್ಯ
ದಿವ್ಯ (೪) ಸತ್ಯ ಪ್ರಮಾಣಕ್ಕಾಗಿ ಹಿಡಿಯುವ ಕಾಸಿದ ಲೋಹದ ತುಂಡು
ದೀಹ (೩.೩) ವನ್ಯಮೃಗಗಳನ್ನು ಆಕರ್ಷಿಸಲು ಒಡ್ಡಿದ ಸಾಕುಪ್ರಾಣಿ
ದೆಸೆಯು (೨.೯) ದೆಸೆಯು
ದೋಷವನದಾವ (೨.೩೫) ತಪ್ಪುಗಳೆನ್ನುವ ಕಾಡಿಗೆ ಕಿಚ್ಚಿನಂತಿರುವವನು
ದಂದುಗ (೨.೨೭) ದುಃಖ, ಸಂಕಟ

## ಧ

ಧರ್ಮ (೨.೫) ಬಡ್ಡಿ
ಧಾತು (೩.೧೯) ಶಕ್ತಿ
ಧಾವತಿ (೧.೩) ಶ್ರಮ, ಆಯಾಸ
ಧ್ವಾನ (೧.೨೫) ಶಬ್ದ
ಧೀಮತಿ (೧.೫೬) ಸಮಚಿತ್ತವುಳ್ಳವನು
ಧೇನು (೨.೧೭) ಹಸು

## ನ

ನತದುರಿತ (೨.೨೮) ಪಾಪಗಳನ್ನು ಬಾಗಿಸುವ
ನವೆದೆ (೨.೨೨) ಸೊರಗಿದೆ, ನರಳಿದೆ, ಕಷ್ಟಪಟ್ಟೆ
ನಸಿ (೩.೩೬) ಕ್ಷೀಣವಾಗು, ಸವೆ, ಚಲನೆಯಿಲ್ಲವಾಗು
ನಾಳಲ್ (೧.೫) ಲಾಳದ ಕಡ್ಡಿ
ನೀಱ (೩.೪೬) ಸುಂದರ
ನುತಿಸು (೫) ಸ್ತುತಿಸು, ಹೊಗಳು
ನುಲಿ (೧.೫೭) ಹಗ್ಗ
ನಿಕರ (೩.೩) ಸಮೂಹ
ನಿಟ್ಟೆಲು (೩.೨೭) ಉದ್ದವಾದ ಎಲುಬು
ನಿಡುಸರ (೧.೩೫) ಗಟ್ಟಿ ದನಿ
ನಿದಾನ (೩.೧೭) ಮೌಲಿಕ, ತಾತ್ವಿಕ
ನಿಧಾನ (೨.೯ ; ೨.೨೨) ಗುಪ್ತನಿಧಿ
ನಿಮಿತ್ತ (೩.೧೬) ಕಾರಣ
ನಿರಾವರಣ (೩.೬) ಮಾಯಾತೀತ, ಅಜ್ಞಾನವಿಲ್ಲದವನು

ನಿರೋಧ (೩.೧೧) ಅಡ್ಡಿ, ಆತಂಕ
ನಿವಹ (೩.೧೮) ಸಮೂಹ
ನಿರ್ವಾಣ (೩.೬) ಮುಕ್ತಿ
ನಿವುಹು (೩.೩೬) ನೀವು
ನಿರ್ವೇಗ (೩.೨೬) ಏಕನಿಷ್ಠೆ, ಭಾವರಹಿತ
ನಿಷ್ಠ (೩.೨೮) ಕೆಟ್ಟವನು, ದುಷ್ಟ
ನಿಷ್ಕಾಮಿ (೩.೨೬) ಅನಾಸಕ್ತ, ನಿರಾಸೆವಂತ
ನೆರವಿ (೧.೪೪ ; ೩.೨೧) ಸಮೂಹ, ಗುಂಪು
ನೆಱೆ (೧.೨೯) ಸಂಪೂರ್ಣವಾಗಿ
ನೆಲದೆಱೆ (೧.೬೩) ನೆಲದ ಸುಂಕ
ನೇಮ (೨.೧೮) ಆಜ್ಞೆ, ಅಪ್ಪಣೆ

## ಪ

ಪಚ್ಚಳ (೩.೨೫ ; ೩.೨೭) ಚರ್ಮ
ಪಟಲ (೨) ಸಮೂಹ
ಪಡುವಣ (೩.೧೯) ಪಶ್ಚಿಮ
ಪಟಿಪಱಿಸುವ (೪.೧೫) ಅಹಂಕರಿಸುವ
ಪರಿಚ್ಛೇದ (೩.೧೭) ವಿಂಗಡಣೆ, ತೀರ್ಮಾನ
ಪರಿಣಾಮ (೩.೩೭) ಸುಖ, ತೃಪ್ತಿ
ಪಿಪಾಸೆ (೩.೨೧) ಬಾಯಾರಿಕೆ
ಪುಟಂಬೆತ್ತ (೩.೪) ನಿರ್ಮಲವಾದ
ಪುತ್ಥಳಿ (೪.೧೦) ಗೊಂಬೆ
ಪುರಮರ್ಧನ (೩.೪೫) ತ್ರಿಪುರಾರಿ, ಶಿವ
ಪುಳಿನ (೩.೩) ಮರಳಿನ ದಿನ್ನೆ
ಪೂರಾಯ (೪.೮) ವಿಶಾಲ
ಪಂಥ (೧.೬೧) ಮಾರ್ಗ, ರೀತಿ
ಪ್ರತಿಯಿಲ್ಲ (೪) ಸಮಾನವಿಲ್ಲ
ಪ್ರಸೂನ (೩.೩) ಹೂವು

## ಬ

ಬಗೆ (೧.೮ ; ೧.೬೦) ಆಲೋಚಿಸು
ಬಗೆ (೪.೧೨) ಲಕ್ಷಿಸು
ಬಟ್ಟೆ (೧.೨೩ ; ೩.೩೩) ಮಾರ್ಗ, ದಾರಿ
ಬತ್ತಾಯ (೧.೩೮) ಭೃತ್ಯ
ಬನ್ನ (೪.೧೫) ಭಂಗ, ಕೇಡು, ಸೋಲು
ಬಲ್ಲಹ (೨.೨೨) ವಲ್ಲಭ, ಒಡೆಯ
ಬಲುಹು (೧.೪೭) ಶಕ್ತಿ
ಬಲೋದಗ್ರ ವಿಗ್ರಹನು (೨) ಬಲದಿಂದ ಉತ್ಕೃಷ್ಟವಾದ ದೇಹವುಳ್ಳವನು
ಬಸವಳಿ (೩.೨೮) ಮೂರ್ಛೆಹೋಗು, ಪರವಶನಾಗು
ಬಳಾಹಕ (೩.೧) ಮೋಡ
ಬಾದಣವಾದ (೩.೨೭) ಕುಳಿಬಿದ್ದ
ಬಾಯಾಲು (೨.೪) ಬಾಯಿಬಿಟ್ಟು ಕೂಗು
ಬಾರಿ (೧.೪೬) ಬಾರು, ತೊಗಲಿನ ಪಟ್ಟಿ (?)
ಬಿಟ್ಟಿ (೧.೪೩) ಪ್ರತಿಫಲವಿಲ್ಲದೆ ಮಾಡುವ ಕೆಲಸ
ಬಿಱುಬಿಸಿಲು (೧.೩೧) ತೀಕ್ಷ್ಣವಾದ ಬಿಸಿಲು
ಬಿಸಗಳ (೩.೨೧) ಶಿವ, ನೀಲಕಂಠ
ಬೀದಿವರಿ (೧.೧೯) ಸ್ವೇಚ್ಛೆಯಾಗಿ ಮುಂದುವರಿ
ಬೀವು (೧.೫೭) ನರ (?)
ಬೆಡಂಗು (೧.೪೩) ಚಮತ್ಕಾರ
ಬೆಳತಿಗೆ (೪.೬) ಬಿಳುಪಾದ, ಹೊಳಪಾದ
ಬೇನೆಯಱಿಯದ (೭) ನೋವನ್ನೇ ತಿಳಿಯದ
ಬೇಹ (೧.೪೧) ಮುಖ್ಯ
ಬೇಹುದು (೧.೫೩) ಬೇಕು
ಬೈಗು (೧.೩೭) ಸಾಯಂಕಾಲ
ಬೋಳೈಪ (೧.೩) ಸಮಾಧಾನಪಡಿಸುವ

## ಭ

ಭರ (೧.೫೨) ರಭಸ
ಭರವಸ ([illegible]) ತ್ವರಿತ, ವೇಗ

ಭವಿ (೧.೫೮) ವೀರಶೈವನಲ್ಲದವನು
ಭಾಗೆ (೨.೮) ಪಾಲು
ಭಾಸುರ (೧.೬೫) ಪ್ರಕಾಶಮಾನವಾದ
ಭಾಷೆ (೫) ಪ್ರತಿಜ್ಞೆ
ಭಿತ್ತಿ (೨.೧೧) ಗೋಡೆ

## ಮ

ಮಗುಳ್ (೩.೩೨) ಹಿಂದಿರುಗು
ಮಡಲಿಡು (೩.೨೦) ವ್ಯಾಪಿಸು
ಮದ್ದು (೧.೫೨) ಔಷಧ
ಮರುಜೇವಣಿ (೧.೨೭) ಸತ್ತವರನ್ನು ಬದುಕಿಸುವ ಸಸ್ಯ ವಿಶೇಷ
ಮರುಳು (೩.೩೯) ಹುಚ್ಚು
ಮಸಕ (೧.೩೦) ವಿಜೃಂಭಣೆ
ಮಂಡನ (೩.೧೮) ಆಭರಣ
ಮಂತಣಗೃಹ (೪.೧೩) ಆಲೋಚನಾ ಮಂದಿರ ; ಏಕಾಂತ
ಮಾಣ್ (೨.೬) ಬಿಡು
ಮಾತಂಗ (೧.೩೯) ಆನೆ
ಮಾಯಾಮಥನಸಂಗ್ರಾಮ (೨) ಅಜ್ಞಾನವನ್ನು ನಿಗ್ರಹಿಸುವ ಯುದ್ಧವುಳ್ಳವನು
ಮಾಳ್ಕೆ (೧) ಮಾಡಲಿ, ಅನುಗ್ರಹಿಸಲಿ
ಮಿಡುಕು (೩.೩೧) ಚಲಿಸು, ಅಲ್ಲಾಡು
ಮುಪ್ಪುರಿ (೧.೪೬) ಮೂರು ಎಳೆ ಹೊಸೆದು ಮಾಡಿದ ಹುರಿ
ಮುಂಡಿಗೆ (೪) ಸವಾಲು
ಮುಂದುಗೆಡು (೩.೩೯) ದಾರಿಕಾಣದಾಗು
ಮೆಲುತ (೧.೫೭) ತಿನ್ನುತ್ತ

ಮೊಗಮೋಟ (೩.೨೯) ಅಪಮಾನ ಹೊಂದಿದವ
ಮೊಳೆ (೩.೧೮) ಅಂಕುರ, ಮೊಳಕೆ

## ರ

ರತಿಪತಿ (೧) ಮನ್ಮಥ
ರಾಜಿಪ (೩.೧) ಕಂಗೊಳಿಸುವ
ರುಕ್ಷ (೩.೩೪) ಒರಟು, ನಯವಲ್ಲದ
ರೂಹು (೩.೮) ರೂಪು

## ಲ

ಲಕ್ಷ (೮) ಪದ
ಲಸಿತ (೪.೧) ಪ್ರಕಾಶಿಸುವ, ಶೋಭಿಸುವ
ಲಾಕುಳ (೨.೨೨) ಯೋಗದಂಡ
ಲಾಗು (೧.೩೭) ಅಗ್ಗ, ಒಪ್ಪಿಗೆ (?)
ಲೇಸಿಂಗೆ (೭) ಒಳ್ಳೆಯದಕ್ಕೆ

## ವ

ವತ್ಸ (೨.೧೭) ಕರು
ವಲ್ಕಲವಸನ (೩.೫) ನಾರುಮಡಿ
ವಂದಿ (೨.೧೩) ಹೊಗಳುಭಟ್ಟ
ವಿಶಾಪ (೨.೧೪) ಶಾಪ ಕಳೆದು ಹೋಗುವುದು
ವಸುಮತಿಯ ಶಶಿವೌಳಿ (೨.೨೫) ಭೂಲೋಕದ ಶಿವ–ಸಿದ್ಧರಾಮ
ವಾಣೀಪತಿ (೧) ಬ್ರಹ್ಮ
ವ್ರಾತ (೩.೫) ಸಮೂಹ
ವಿಗ್ರಹ (೨) ಆಕಾರ, ದೇಹ
ವಿತಾನ (೩.೧೮) ಸಮೂಹ
ವಿಭೇದ (೩.೨೪) ಪ್ರಭೇದ, ವ್ಯತ್ಯಾಸ

ವಿಮಾನ (೧.೬೪) ಹೆಣವನ್ನು ಸಾಗಿಸುವ ಮಂಟಪ
ವಿಸರ (೮) ಸಮೂಹ
ವಿಹಿತ (೩.೨) ಯೋಗ್ಯವಾದ, ಉಚಿತವಾದ
ವೃಷಧ್ವಜ (೧.೨೮) ನಂದಿಧ್ವಜ
ವೇದನಾಲ್ಕು (೪) ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ
ವೇದ್ಯರು (೩.೪೫) ಜ್ಞಾನಿಗಳು
ಶರಭ (೧.೯) ಒಂದು ಕಾಲ್ಪನಿಕ ಮೃಗ
ಶಿವದಿಡೆ (೨.೨೬) ಶಿವಧೋ, ಶಿವಧೋ ಎಂದು ಮುಂತಾಗಿ ಕರೆಯಲು, ಶಿವನಿಗೆ ಮೊರೆಯಿಡಲು
ಶ್ರೀಪತಿ (೧) ವಿಷ್ಣು
ಶ್ರುತಿ (೩.೨) ವೇದ

ಸ

ಸಮನಿಸು (೩.೯) ಉಂಟಾಗು
ಸಮಯ (೩.೧೬) ಧರ್ಮ
ಸರಿ (೫) ಸಮಾನ
ಸರಿತ್ಪತಿ (೧) ಸಮುದ್ರ
ಸರುವು (೧.೫) ಸರ, ಹಳ್ಳ
ಸಲ್ಲ (೩.೪೧) ಯೋಗ್ಯವಾದುದಲ್ಲದ್ದು
ಸವುಢಿ (೧.೪೦) ಅಪ್ರಯೋಜಕ
ಸಂಚಿತ (೨.೨೭) ಕೂಡಿಸಿ ಇಟ್ಟ
ಸಂಬಳಿಗೋಲು (೧.೪೬) ಹೊಲೆಯರು ತಮ್ಮೆದುರಿಗೆ ಬರುವವರನ್ನು ಎಚ್ಚರಿಸುವುದಕ್ಕಾಗಿ ಹಿಡಿದುಕೊಳ್ಳುವ ಬಿದಿರು ಕೋಲು
ಸ್ವಾಹಾಪತಿ (೧) ಅಗ್ನಿ
ಸಿದ್ಧಿಗೆ (೧.೬೪) ಚಟ್ಟ
ಸಿಂಪು (೪.೧೨) ಚಿಪ್ಪು
ಸೀಗುರಿ (೨.೧೩) ಒಂದು ಬಗೆಯ ಚೌರಿ
ಸುಯ್ (೩.೨೬) ದುಃಖದಿಂದ ಬಿಡುವ ಉಸಿರು, ನಿಟ್ಟುಸಿರು
ಸುರಪತಿ (೧) ದೇವೇಂದ್ರ
ಸುರಭಿ (೩.೨) ಮನೋಹರವಾದ
ಸುರಭೂಜ (೩.೧೧) ಕಲ್ಪವೃಕ್ಷ
ಸೂಡಿ (೧.೧೨ ; ೧.೨೯) ಶಿರದಲ್ಲಿ ಧರಿಸಿ
ಸೂಳ್ (೩.೩೯) ಬಾರಿ, ಸಲ
ಸೆಕ್ಕೆ (೧.೧೪) ಚೆಕ್ಕೆ
ಸೆಡೆ (೧.೫೯) ನಡುಗು, ಭಯಪಡು
ಸೈಪು (೨.೧೯) ಪುಣ್ಯ
ಸೊಡರು (೬) ದೀಪ
ಸೊಡ್ಡಳ (೩.೯) ಸೋಮೇಶ್ವರ
ಸೋಮಧರ (೨) ಚದ್ರನನ್ನು ಶಿರದಲ್ಲಿ ಧರಿಸಿರುವ ಶಿವ
ಸೋಮಧಾಮ (೨) ಚಂದ್ರನ ಕಾಂತಿ

ಹ

ಹಕ್ಕೆ (೩.೯) ವಿಶ್ರಾಂತಿಸ್ಥಾನ
ಹಗಿನ (೧.೭) ಅಂಟು, ಗಿಡದ ಒಂದು ಬಗೆ ಸೊನೆ
ಹಡಪಿಗ (೧.೪೬) ಸಂಚಿಯವನು
ಹಡೆ (೩.೧೨) ಪಡೆ
ಹಣುಗಿ (೧.೫) ಬಾಗಿ
ಹದನ (೩.೮) ಕಾರಣ
ಹದಿನೆಂಟು ಪೌರಾಣ (೪) ವಿಷ್ಣು, ನಾರದೀಯ, ಭಾಗವತ, ಗರುಡ, ಪದ್ಮ, ವರಾಹ, ಮತ್ಸ್ಯ, ಕೂರ್ಮ, ಲಿಂಗ, ಶಿವ, ಸ್ಕಂದ, ಅಗ್ನಿ, ಬ್ರಹ್ಮ, ಬ್ರಹ್ಮಾಂಡ, ಬ್ರಹ್ಮವೈವರ್ತ, ಮಾರ್ಕಾಂಡೇಯ, ಭವಿಷ್ಯ, ವಾಯು

ಸದುಳ (೧.೪೯ ; ೨.೯) ಕ್ಷೇಮ
ಸಮ್ಮೃದ (೩.೨೬) ಮೂರ್ಛೆ
ಸರಣ (೩.೩೮) ಪ್ರಾಣ
ಸರದ (೩.೭) ವ್ಯಾಪಾರಿ
ಸರಿ (೨.೩೦) ಸಿಂಹ
ಸರಿತಂದು (೧.೨೪) ಶೀಘ್ರವಾಗಿ ಬಂದು, ವೇಗವಾಗಿ ಬಂದು
ಸಱಿ (೧.೬೨) ತಮಟೆ
ಸಸನಾಯ್ತು (೩.೯) ಒಳ್ಳೆಯದಾಯಿತು
ಸಂಜರಿಸಿ (೧.೬೪) ಹಂದರ ಹಾಕಿ
ಸಂದೊಗಲು (೧.೫೭) ಹಸಿಯ ತೊಗಲು
ಹಾಗ (೧.೬೧) ಹನ್ನೆರಡು ಕಾಸು
ಹಾರು (೧.೧ ; ೧.೪೫) ನಿರೀಕ್ಷಿಸು
ಹುಡುಕು ನೀರು (೨.೧೬) ಕುದಿನೀರು, ಬಿಸಿನೀರು
ಹುಯ್ಯಲಿಡು (೩.೩೧) ಧ್ವನಿತೆಗೆದು ಅಳು
ಹುಱುಗುಟ್ಟಿಕೊಳುತ (೪.೧೪) ತನ್ನನ್ನು ತಾನೇ ಹಳಿದುಕೊಳ್ಳುತ್ತ
ಹುಲುವಿಡಿ (೨.೭) ರಕ್ಷಣೆಗಾಗಿ ಮೊರೆಯಿಡು
ಹೆಡ್ಡೈಸು (೩.೨೭) ಹಿಂದೆಗೆ, ಅಂಜು
ಹೆಮ್ಮಗ (೧.೪೪) ಹಿರಿಯ ಮಗ
ಹೇವರಿಸು (೨.೧೧) ಜುಗುಪ್ಸೆ ಪಡು, ಅಸಮಾಧಾನ ಹೊಂದು
ಹೊದ್ದು (೧.೬) ಹತ್ತಿರ ಹೋಗು
ಹೊಪ್ಪಳಿಸು (೩.೨೨) ಗುಳ್ಳೆಯೊಡೆದು ರಸಿಕೆ ಬಸಿ
ಹೊಯಿಕೈ (೩.೨೪) ಸರಿಸಮಾನ
ಹೊಯ್ಲು (೧.೩೩) ಪೆಟ್ಟು
ಹೊಱೆಕಾಱ (೧.೫೨) ಭಾರವನ್ನು ಹೊರುವವನು
ಹೊಲಬು (೩.೪೫) ರೀತಿ, ಗುರುತು
ಹೊಲೆ (೧.೫೨) ಮೈಲಿಗೆ
ಹೊಸೆ (೩.೩೬) ಕಡೆ, ತಿಕ್ಕು
ಹೊಳ್ಳು (೪.೧೧) ನಿಸ್ಸತ್ವ, ಟೊಳ್ಳು
ಹೊಂಗಿಸಿ (೧.೪೩) ವಿಸ್ತರಿಸಿ
ಹೋಹರು (೨.೪) ಹೋಗುವವರು

*

